




ತ್ರೈಮಾಸಿಕ
ಸಂಪುಟ : ೧೫
ಸಂಚಿಕೆ : ೩(೭೨)
ನವೆಂಬರ್ ೨೦೦೬

ಸಂಪಾದಕ :
ಡಿ.ವಿ. ಪ್ರಹ್ಲಾದ್

ಚಂದಾವಿವರ
ವಾರ್ಷಿಕ ಚಂದಾ : ರೂ. ೧೫೦/-
ಎರಡು ವರ್ಷಕ್ಕೆ : ರೂ. ೩೦೦/-
ಐದು ವರ್ಷಕ್ಕೆ : ರೂ. ೬೫೦/-

ಸಂಪರ್ಕ ವಿಳಾಸ
ನಂ. ೧೦೦, ೨ನೇ ಮುಖ್ಯರಸ್ತೆ,
೬ನೇ ಬ್ಲಾಕ್, ೩ನೇ ಹಂತ,
೩ನೇ ಘಟ್ಟ, ಬನಶಂಕರಿ
ಬೆಂಗಳೂರು - ೫೬೦ ೦೮೫
ಫೋನ್ ನಂ. ೦೮೦-೨೬೭೯೧೯೨೫
ಮೊಬೈಲ್: ೯೮೪೪೦ ೬೩೫೧೪

email:
prahlad118@yahoo.com

ಮುಖಪುಟ ರೇಖಾ ಚಿತ್ರ: ಸೃಜನ್

ಅಕ್ಷರ-ವಿನ್ಯಾಸ
ಎಂ.ಆರ್. ಗುರುಪ್ರಸಾದ್

ಕವಿತೆಗೆ ಗೊತ್ತಿರುವುದು
ಹೋದಲ್ಲಿ ತಳವೂರುವುದು
ಕರೆದರೆ ಬಾರದಿರುವುದು

– ಪ್ರತಿಭಾ ನಂದಕುಮಾರ್

# ಈ ಸಂಚಿಕೆಯಲ್ಲಿ...

## ಲೇಖನಗಳು...

# ಹೊಳೆದದ್ದು ತಾರೆ ಉಳಿದದ್ದು ಆಕಾಶ

ಪ್ರಿಯ ಓದುಗರೆ,

ಅವರನ್ನು ನಾವು ಕರೆಯುತ್ತಿದ್ದುದು 'ಬಾಪಟ್' ಅಂತ. ಹಾಗಂದರೆ ಏನೂ ಅಂತಲೂ ನಮಗೆ ಗೊತ್ತಿರಲಿಲ್ಲ. ಶುಭ್ರವಾದ ಹಂಸದ ಹಾಗಿದ್ದ ಬಿಳಿ ಬಟ್ಟೆ ಗಾಂಧಿ ಟೋಪಿ ಹಾಕುತ್ತಿದ್ದ ಹಸನ್ಮುಖಿ ನಮ್ಮ ರಸ್ತೆಯ ಎಲ್ಲಾ ಜನರಿಗೂ ಗೊತ್ತಿದ್ದವರು, ಬೇಕಾಗಿದ್ದವರು. ನಾವಿದ್ದ 'ಹರಿವಿಲಾಸ್' ಮಹಡಿ ಮನೆಯ ನಮ್ಮ ಬಾಲ್ಕನಿಗೂ ದ್ವಾರಕಾ ಹೋಟೆಲಿನ ರೂಮುಗಳ ಸಾಲಿನ ಮಹಡಿಗೂ ಕೆಲವೇ ಅಡಿಗಳಷ್ಟು ಅಕ್ಕಪಕ್ಕದ ಅಂತರ. ಕ್ರಿಕೆಟ್ ಆ ಕಾಲದ ನಮ್ಮ ಪ್ರೀತಿಯ ಆಟ. ಬರೀ ಆಟವಾಗಿಲ್ಲದೆ ನಮ್ಮಗಳ ಬಾಲ್ಯ ಕಾಲದ ಬಹುಮುಖ್ಯ ಗೀಳು ಆದಾಗಿತ್ತು. ಅರ್ಧ ನಾವಿದ್ದ ಮನೆಯ ಮುಂದಿನ ಅಂಗಳ, ಇನ್ನರ್ಧ ವಿಶಾಲವಾದ ರಸ್ತೆಯನ್ನು ಆಕ್ರಮಿಸಿಕೊಂಡು ಆಡುತ್ತಿದ್ದ ಕ್ರಿಕೆಟ್ಟಿಗೆ ಮಜವೋ ಮಜ. ನಾವುಗಳೇ ಕೈಯ್ಯಾರೆ ಬರೆದು ರೂಪಿಸಿದ್ದ ಪುಟ್ಟ ಸ್ಕೋರ್‌ಬೋರ್ಡ್ ಹಿರಿ-ಕಿರಿಯರೆಂಬ ಭೇದವಿಲ್ಲದೆ ಸಂಜೆಗಳು ನಮ್ಮಗಳ ಆಟದ ಗದ್ದಲ, ಕಲರವದಲ್ಲಿ ಅದ್ದಿಹೋಗುತ್ತಿದ್ದವು. ಒಮ್ಮೊಮ್ಮೆ ಬಾಪಟ್ ನಮ್ಮ ಜೊತೆಗೆ ಸೇರುತ್ತಿದ್ದರು. ಕೆಲವು ಸಲ ಬೌಲಿಂಗ್, ಇನ್ನೂ ಹೆಚ್ಚಿನ ಲಹರಿಯಲ್ಲಿದ್ದರೆ ಒಂದಷ್ಟು ಹೊತ್ತು ಬ್ಯಾಟಿಂಗ್‌ಗೆ ಇಳಿಯುತ್ತಿದ್ದರು. ಬಹಳ ಸಲ ನಾವು ಬಾರಿಸಿದ ಸಿಕ್ಸರ್‌ಗೆ ಚೆಂಡು ಪಕ್ಕದ ದ್ವಾರಕಾ ಹೋಟೆಲಿನ ಅತಿ ಜನಪ್ರಿಯವಾಗಿದ್ದ ಖಾಲಿ ದೋಸೆ ಮೆಲ್ಲುತ್ತಿದ್ದ ಗಿರಾಕಿಗಳ ತಟ್ಟೆಗೆ ಬಡಿದು, ಮುಖ-ಮೈಗೆಲ್ಲಾ ಚಟ್ನಿ ಸಿಡಿದು ಅದರ ಮಾಲೀಕ , ಮ್ಯಾನೇಜರ್‌ಗಳಿಗೂ ನಮಗೂ ಬದ್ಧ ದ್ವೇಷ. ಅದಕ್ಕೆಂದೇ ನಮ್ಮ ಆಟಕ್ಕೆ ಒಂದು ಭಿನ್ನವಾದ ನಿಯಮ ಇತ್ತು. ಮೊದಲ ಪಿಚ್ ರಸ್ತೆ ಅಥವಾ ಕಾಂಪೌಂಡಿನ ಆಚೆಗೆ ಬಾರಿಸಿದವರು ನಿರ್ದಾಕ್ಷಿಣ್ಯವಾಗಿ ಔಟಾಗುತ್ತಿದ್ದರು. ಆ ಸಿಡುಕು ಮುಖದ ಜನರ ನಡುವೆ ಬಾಪಟ್ ಯಾವಾಗಲೂ ಪ್ರಿಯರಾಗುತ್ತಿದ್ದರು. ನಗುಮುಖದ ಮಕ್ಕಳು ದೊಡ್ಡವರೆನ್ನದೆ ಎಲ್ಲರ ಜೊತೆಗೂ ಮೆಲುವಾಗಿ ಮಾತಾಡುತ್ತಿದ್ದ ಬಾಪಟ್ ಅಂದರೆ ಅವರ ನಿಜವಾದ ಹೆಸರು ಎಸ್.ಕೆ. ಕರೀಂಖಾನ್ ಅಂತಾಗಲೀ ಅವರು ಒಬ್ಬ ಲೇಖಕ, ಜಾನಪದ ವಿದ್ವಾಂಸ, ಅರಿವಿನ ಕಣಜ ಅನ್ನುವುದೆಲ್ಲಾ ನಮಗೇನೂ ಗೊತ್ತಿಲ್ಲದಿದ್ದ ಕಾಲ ಅದು.

ಬಹಳ ಸಲ ಬಾಪಟ್ ರೂಮಿಗೂ ನಮ್ಮ ಸವಾರಿ ಸಾಗುತ್ತಿತ್ತು. ಅವರ ಬಗ್ಗೆ ಇದ್ದ ಒಂದು ಕುತಹಲದ ಜೊತೆಗೆ ಅವರು ನಮಗೆಲ್ಲಾ ಕೊಡಿಸುತ್ತಿದ್ದ ಚಾಕಲೇಟು, ಬರ್ಫಿ, ಚಿಕ್ಕಿಗಳಿಗೆ ನಾವುಗಳು ಸೋಲುತ್ತಿದ್ದೆವು. ಕೈಯಲ್ಲಿ

ಹಣವಿದ್ದಾಗ ಬಾಟಪ್ ಎಷ್ಟೊಂದು ಜನರಿಗೆ ತಿಂಡಿಕೊಡಿಸುತ್ತಿದ್ದರು ಅಂತ ಈಗ ನೆನೆದಾಗ ಆಶ್ಚರ್ಯವಾಗುತ್ತದೆ.

ಬಹಳ ಸಲ ಸ್ನಾನಕ್ಕೆ ಮುಂಚೆ ಸೊಂಟಕ್ಕೊಂದು ಟವೆಲು ಸುತ್ತಿಕೊಂಡು ಬಿಸಿಲು ಕಾಯಿಸುತ್ತಾ ಬಾಲ್ಕನಿಯಲ್ಲಿ ನಿಂತಿರುತ್ತಿದ್ದರು. ಅವರ ರೂಮಿಗೆ ಹೋದಾಗ ಹೆಗ್ಗಣಗಳ ಹಾಗೆ ಬೆಳೆದಿದ್ದ ನಮ್ಮನ್ನೂ ಪುಟ್ಟ ಮಕ್ಕಳ ಹಾಗೆ ಮುದ್ದು ಮಾಡುತ್ತಿದ್ದರು. ಒಮ್ಮೊಮ್ಮೆ ಎದುರು ಸಿಕ್ಕಾಗ ನಾಲ್ಕಾಣೆಯೋ, ಎಂಟಾಣೆಯೋ ಕೊಟ್ಟುಬಿಡುತ್ತಿದ್ದರು. ನಮಗೆ ಆ ಬಿಲ್ಲೆಯನ್ನು ನಮ್ಮ ದೊಡ್ಡವರಿಗೆ ಗೊತ್ತಾಗದ ಹಾಗೆ ಖರ್ಚು ಮಾಡಿಕೊಳ್ಳುವುದು ಬಲು ದೊಡ್ಡ ಆತಂಕದ, ಕಷ್ಟದ ಕೆಲಸವಾಗಿತ್ತು.

ಒಮ್ಮೆ ಅವರ ರೂಮಿಗೆ ಹೋದಾಗ ಅದರ ತುಂಬಾ ಯಾರ್‍ಯಾರೋ ಇದ್ದರು. ದೊಡ್ಡ ಚಕ್ರಾಕಾರದ ಸ್ಟೂಲುಗಳನ್ನು ಇಟ್ಟುಕೊಂಡಿದ್ದ ಅವರು ಯಾವುದೋ ಸಿನಿಮಾದ ಹಾಡುಗಳ ಟೇಪನ್ನು ಹಾಕಿ ಅವರಿಗೆ ಕೇಳಿಸುತ್ತಿದ್ದರು. ಟೇಬಲ್ಲಿನ ಮೇಲೆ ಬಿಳಿ ಬಿಳಿ ಹಾಳೆ, ಅದರ ತುಂಬಾ ಗುಂಡಾಗಿ ಮುದ್ದಾಗಿ ಬರೆದ ಕನ್ನಡದ ಅಕ್ಷರಗಳು. 'ನೀವು ಬರೀತೀರಾ' ಅಂದೆ. ಬಾಪಟ್ ನಕ್ಕರು. 'ನಾನೂ ಬರೀಬೇಕು' ಅಂದೆ. ಏನು ಹೇಳಿದರೋ ನೆನಪಿಲ್ಲ, ಅವರು ಸಿನಿಮಾಗಳಿಗೆ ಹಾಡು ಬರೆಯುತ್ತಾರೆ ಅಂತನ್ನುವ ವಿಷಯ ನಮ್ಮ ಎಳೆಯ ಮನಸ್ಸುಗಳಿಗೆ ಗೋಚರಿಸುತ್ತಿತ್ತು. ಅವರ ರೂಮಿನಲ್ಲಿದ್ದ ಶೃಂಗೇರಿ ಶಾರದೆಯ ದೊಡ್ಡ ಫೋಟೋ ಅದರ ಮುಂದೆ ಹಚ್ಚಿದ್ದ ಊದಿನ ಕಡ್ಡಿಯ ಸುಗಂಧ ಎಷ್ಟೊಂದು ವರ್ಷಗಳು ಕಳೆದಿದ್ದರೂ ಮನಸ್ಸಿನಲ್ಲಿ ಮುಕ್ಕಾಗದೇ ಉಳಿದಿದೆ.

'ಯಾರು ಹಿತವರು' ಅನ್ನುವ ಹೆಸರಿನ ಸಿನಿಮಾದ ಪೋಸ್ಟರ್ ಒಂದು ಬಾಪಟ್ ರೂಮಿನ ಬಾಗಿಲಿಗೆ ದ್ವಾರಕಾ ಹೋಟೆಲಿನ ಗೋಡೆಗೆ ಅಂಟಿಸಿದ್ದುದು ನೆನಪಿದೆ. ಆ ಸಿನಿಮಾ ಹೊರಬಂದು ಯಶಸ್ವಿಯಾಯ್ತೋ ಇಲ್ಲವೋ ನೆನಪಿಲ್ಲ, ಆದರೆ ಆ ಪೋಸ್ಟರ್ ಮಾತ್ರ ಅಚ್ಚಳಿಯದ ನೆನಪಾಗಿದೆ.

ರಸ್ತೆ ಬದಿಯಲ್ಲಿ ಹುಡುಗರು, ಮಕ್ಕಳು ಸೇರಿ ಗಣಪತಿ ಕೂಡಿಸುತ್ತಿದ್ದೆವು. ಆ ಕೆಲಸಕ್ಕೆ ತಿಂಗಳುಗಟ್ಟಲೆ ನಾವುಗಳು ಓಡಾಡುತ್ತಿದ್ದೆವು. ನಮ್ಮ ಗುಂಪಿನ ಗಣಪತಿ ಪೂಜೆಗೆ ಅಂತ ಬಾಟಪ್ ನೂರು ರೂಪಾಯಿ ಕೊಟ್ಟಿದ್ದರು. ಇದು ದೊಡ್ಡ ಮೊತ್ತವಾಗಿತ್ತು. ಹಾಗೇ ನಮ್ಮ ಹೆಮ್ಮೆಗೂ ಕಾರಣವಾಗಿತ್ತು. ಹಾಗೇ ನಮ್ಮ ಆ ಕಾಲದ ಕ್ರಿಕೆಟ್ಟು, ಬುಗುರಿ, ಆಟಗಳ ಪರಮ ವೈರಿಯಾಗಿದ್ದ 'ಅಮ್ಮಚ್ಚಿ' ಅನ್ನುವ ಹುಡುಗನ ಗುಂಪಿಗೂ ಅಷ್ಟೇ ದುಡ್ಡು ಕೊಟ್ಟಿದ್ದು ಕೇಳಿ ನಮ್ಮ ಹೊಟ್ಟೆಗಳಲ್ಲಿ ಖಾರಾ ಅರೆದ ಹಾಗಾದರೂ, ಅವರಿಗಿದ್ದ ಸಮಭಾವದ ಪ್ರೀತಿ ನಮ್ಮಗಳ ಸಣ್ಣಸಣ್ಣ ಮನಸ್ಸುಗಳಿಗೆ ಹೊಳೆದಿರಲಿಲ್ಲ.

ಅನೇಕ ವರ್ಷಗಳಾದ ಮೇಲೆ ರೇಡಿಯೋದಲ್ಲಿ ಕೇಳಿಬರುತ್ತಿದ್ದ 'ಜಯಗೌರಿ ಜಗದೀಶ್ವರಿ' ಮೊದಲಾದ ಹಾಡುಗಳು ಅವರೇ ಬರೆದಿದ್ದು ಅಂತ ಅರ್ಥವಾಗತೊಡಗಿ ಹೆಮ್ಮೆ ಅನ್ನಿಸುತ್ತಿತ್ತು. ಯಾವುದೋ ಒಂದು ಕಾರ್ಯಕ್ರಮ ಮುಗಿದ ನಂತರ ಅವರನ್ನು ಹೋಗಿ ನಾನು ಹೀಗೆ ಅಂತ ಗುರುತು ಮಾಡಿಕೊಂಡು ಮಾತನಾಡಿಸಿದೆ. ಸುಮ್ಮನೆ ನಕ್ಕರು. ಅವರಿಗೆ ಯಾವುದೂ ನೆನಪಿರಲಿಲ್ಲ.

ಸಂಘ-ಸಂಸ್ಥೆಗಳು, ಸರ್ಕಾರ ಅವರಿಗೆ ಕೊಟ್ಟ ಗೌರವಗಳು, ಸನ್ಮಾನಗಳು ಪತ್ರಿಕೆಗಳ ಮೂಲಕ ಅವರ ಬಗ್ಗೆ ತಿಳಿದುಬರುತ್ತಿತ್ತು. ಅವರಿಗೆ ಮನೆ ಕೊಟ್ಟಿದ್ದು ಕೊನೆಗಾಲದ ಅವರ ಒಬ್ಬಂಟಿತನ; ಕುಸಿಯುತ್ತಿದ್ದ ಆರೋಗ್ಯ ಇವುಗಳೆಲ್ಲಾ ಓದಿ ಕರುಳು ಚುರುಕ್ ಅನ್ನುತ್ತಿತ್ತು. ಪ್ರಜ್ಞೆ ಇಲ್ಲದ ಸಾವನ್ನು ಎದುರು ನೋಡುತ್ತಿದ್ದ ಆ ವೃದ್ಧ ಜೀವದ ಎದುರು ನಿಂತು ಸಹಾಯದ ನಾಟಕವಾಡುತ್ತ ಫೋಟೋ ತೆಗೆಸಿಕೊಳ್ಳುತ್ತಿದ್ದ ರಾಜಕಾರಣಿಗಳ, ಅಧಿಕಾರಿಗಳ ಬಗ್ಗೆ ಅಸಹ್ಯ ಹುಟ್ಟುತ್ತಿತ್ತು. ಅಕ್ಷರಶಃ ದೇಶ-ಜಾತಿ

ಧರ್ಮಗಳ ಎಲ್ಲಾ ಎಲ್ಲೆಕಟ್ಟುಗಳನ್ನು ಮೀರಿ ಸಂತನ ಹಾಗೆ ಬದುಕಿದ್ದ ಆ ಹಿರಿಯ ಜೀವಕ್ಕೆ ನಾವು ನಮ್ಮ ಬಾಲ್ಯದ ಮಧುರವಾದ ಒಡನಾಟದ ಕ್ಷಣಗಳು ನೆನಪಿರಲಿಕ್ಕೆ ಸಾಧ್ಯವಿರಲಿಲ್ಲ. ಅಷ್ಟೊಂದು ದೊಡ್ಡದಾದ ವಿಶಾಲವಾದ ಯಾನ ಅದು. ಆದರೆ ನನ್ನ ಪ್ರೀತಿಯ ಬಾಪಟ್ ಯಾವಾಗಲೂ ನಮ್ಮ ಬಾಲ್ಯದ ನೆನಪುಗಳ ಜೊತೆಗೆ ಶಾಶ್ವತವಾಗಿರುತ್ತಾರೆ.

★

ಸಂಚಯ ಮತ್ತೊಮ್ಮೆ ತಡವಾಗಿದೆ. ಕಳೆದ ರಾಜಕುಮಾರ್ ಬಗೆಗಿನ ವಿಶೇಷ ಸಂಚಿಕೆಗೆ ದೊರಕಿರುವ ಪ್ರತಿಕ್ರಿಯೆ ಅದ್ಭುತವಾಗಿತ್ತು. ಅಂಚೆ ವೆಚ್ಚ ತೀರಾ ದುಬಾರಿಯಾಗಿದೆ. ಒಂದು ಪ್ರತಿ ರವಾನಿಸಲು ಸುಮಾರು ಎಂಟು ರೂಪಾಯಿಗಳು ವ್ಯಯಿಸಬೇಕಾಗಿದ್ದು, ಜೊತೆಗೆ ಏರುತ್ತಿರುವ ಕಾಗದ ಮುದ್ರಣಗಳ ವೆಚ್ಚಗಳಿಂದಾಗಿ ೨೦೦೭ರ ಜನವರಿಯಿಂದ 'ಸಂಚಯ'ದ ವಾರ್ಷಿಕ ಚಂದಾ ರೂ. ೧೫೦/- ಆಗಲಿದೆ. ದಯವಿಟ್ಟು ಸಹಕರಿಸಿ. ರಾಜಕುಮಾರ್ ಸಂಚಿಕೆ ಕೆಲವರಿಗೆ ಕೊರಿಯರ್ ಮೂಲಕವೂ ತಲುಪಿಲ್ಲ. ಅಂಥವರು ದಯವಿಟ್ಟು ನನ್ನ ಸಂಪರ್ಕಿಸಿ.

ಸಂಚಯ ಬಳಗಕ್ಕೆ, ಪತ್ರಿಕೆಗೆ ಇದು ಇಪ್ಪತ್ತನೆಯ ವರ್ಷದ ಸಂಭ್ರಮ. ಎಲ್ಲ ಓದುಗ ಲೇಖಕರ ಸಹಕಾರ ಪ್ರೀತಿ, ವಿಶ್ವಾಸಗಳು ದೊಡ್ಡದು.

ಮತ್ತೆ ಮುಂದಿನ ಸಂಚಿಕೆಗೆ

ನಿಮ್ಮ

**ಸಂಪಾದಕ**

## ಚಂದಾದಾರರಲ್ಲಿ ಒಂದು ಮಾತು

- ಎಂ.ಓ. ಮೂಲಕ ಚಂದಾ ಕಳುಹಿಸುವವರು ಕೌಂಟರ್ ಫಾಯಿಲ್‌ನಲ್ಲಿ ತಪ್ಪದೆ ನಿಮ್ಮ ಹೆಸರು, ವಿಳಾಸ ಬರೆಯಿರಿ. ಹೊರ ಊರಿನ ಚೆಕ್ ಕಳುಹಿಸುವವರು ರೂ. ೨೦/- ಹೆಚ್ಚಿಗೆ ಕಳುಹಿಸಿ. '*ಸಂಚಯ*'ದ ಹೆಸರಿಗೆ ನಿಮ್ಮ ಚೆಕ್, ಡಿ.ಡಿ. ಕಳುಹಿಸಬಹುದು.
- ನಿಮ್ಮ ವಿಳಾಸ ಬದಲಾದಲ್ಲಿ ದಯವಿಟ್ಟು ಒಂದು ಕಾರ್ಡು ಹಾಕಿ. ನಮ್ಮ ಸಮಯ, ಶ್ರಮ ಸುರಿದು ರೂಪಿಸಿದ ಪತ್ರಿಕೆಯ ಪ್ರತಿಗಳು ವ್ಯರ್ಥ ವಾಪಸ್ಸಾಗುವುದು, ಬೇಡದ ಜಾಗಗಳಲ್ಲಿ ಕೊಳೆಯುವುದು ಬೇಡ.
- ಪುಸ್ತಕ ವಿಮರ್ಶೆ/ಪರಿಚಯಕ್ಕೆ ಎರಡು ಪ್ರತಿಗಳನ್ನು ಕಳುಹಿಸಿ.
- ನಿಮ್ಮ ಸ್ನೇಹಿತರನ್ನು, ಗೆಳೆಯರನ್ನು ಆಸಕ್ತಿ ಇರುವವರನ್ನು ಸಂಚಯಕ್ಕೆ ಚಂದಾದಾರರನ್ನಾಗಿ 'ಸಂಚಯ ಸ್ನೇಹವಲಯ' ವಿಸ್ತರಿಸಿ.
- ನಿಮ್ಮ ಬರಹಗಳು ಮತ್ತು ಸಂಚಯ ಕುರಿತ ಅನಿಸಿಕೆ ಅಭಿಪ್ರಾಯಗಳಿಗೆ ಸ್ವಾಗತವಿದೆ.









## ಸಂಚಯದ ಪ್ರಕಟಣೆಗಳು

| | | |
|---|---|---|
| 1) ಗಾಜು (ಕವಿತೆಗಳು) | ವಿವಿಧ ಕವಿಗಳು | ರೂ. 8-00* |
| 2) ಎ.ಕೆ. ರಾಮಾನುಜನ್ ಹೆಜ್ಜೆ ಗುರುತು | ವಿವಿಧ ಲೇಖಕರು | ರೂ. 15-00* |
| 3) ಸಿಕಾಡ (ಕವನ ಸಂಕಲನ) | ಜಿ. ಕೆ. ರವೀಂದ್ರಕುಮಾರ್ | ರೂ. 35-00* |
| 4) ಡ್ರೀಮರ್ (ಕವಿತೆಗಳು) | ಡಿ. ವಿ. ಪ್ರಹ್ಲಾದ್ | ರೂ. 18-00 |
| 5) ಅಭಿಮುಖ (ಲೇಖನಗಳು) | ಎನ್.ಎಸ್. ಶ್ರೀಧರಮೂರ್ತಿ | ರೂ. 20-00* |
| 6) ಬಗೆ ತೆರೆದ ಬಾನು (ಸಂದರ್ಶನಗಳು) | ಸಂ. ಡಿ. ವಿ. ಪ್ರಹ್ಲಾದ್ | ರೂ. 60-00 |
| 7) ಚೌಕಟ್ಟು (ದೃಶ್ಯಕಲೆ ಕುರಿತು) | ಸಂ. ಎಚ್.ಎ.ಅನಿಲ್‌ಕುಮಾರ್ | ರೂ. 25-00 |
| 8) ಮೌನದ ಹೊತ್ತು (ಅನುವಾದಿತ ಕವಿತೆಗಳು) | ಸು. ರಂ. ಎಕ್ಕುಂಡಿ | ರೂ. 20-00 |
| 9) ಕನಸು ಕೋಳಿಯ ಕತ್ತು (ಕವನಗಳು) | ಗೋವಿಂದ ಹೆಗಡೆ | ರೂ. 30-00 |
| 10) ನಾಟಕ ಅಂತರಂಗ | ಎ.ಆರ್. ನಾಗಭೂಷಣ | ರೂ. 40-00 |
| 11) ಮುಕ್ತಚಂದ | ಶಾಂತಿನಾಥ ದೇಸಾಯಿ ನೆನಪಿನ ಸಂಪುಟ | ರೂ. 85-00 |
| 12) ಕಂಬಾರರ ನಾಟಕಗಳು | ಸಂ. ವಿಕ್ರಮ ವಿಸಾಜಿ | ರೂ. 45-00 |
| 13) ಅವಧೂತನೊಬ್ಬನ ರೂಪಾಂತರ | ಕಥಾ ಸಂಕಲನ | ರೂ. 30-00 |
| 14) ಮರೆತ ಮಾತು (ಕವಿತೆಗಳು) | ಡಿ.ಎಸ್. ರಾಮಸ್ವಾಮಿ | ರೂ. 45-00 |
| 15) ಎರಡು ಏಕಾಂಕಗಳು (ನಾಟಕಗಳು) | ಚಿ. ಶ್ರೀನಿವಾಸರಾಜು | ರೂ. 20-00 |
| 16) ಹೊಸ್ತಿಲು ಹಿಮಾಲಯದ ಮಧ್ಯೆ (ಕವಿತೆಗಳು) | ವಾಸುದೇವ ನಾಡಿಗ್ | ರೂ. 40-00* |
| 17) ಎಕೂಷೆ ಫೆಬ್ರವರಿ | ಸಂ.: ಸುಗತ | ರೂ. 30-00 |
| 18) ಅಗಣಿತ ಚಹರೆ (ಕವಿತೆಗಳು) | ಸಂದೀಪ ನಾಯಕ | ರೂ. 30-00 |
| 19) ಬೆಳಕಿನಾಟ (ವಿಮರ್ಶೆ) | ಡಾ. ಜಿ.ಬಿ. ಹರೀಶ | ರೂ. 60-00 |
| 20) ನಾಳೆಯಿಂದ (ಕವಿತೆಗಳು) | ಡಿ.ವಿ. ಪ್ರಹ್ಲಾದ್ | ರೂ. 30-00 |
| 21) ಜೀವ ಮಿಡಿತದ ಸದ್ದು (ಕವಿತೆಗಳು) | ವಿಭಾ | ರೂ. 50-00 |















*ಪ್ರತಿಗಳು ಮುಗಿದಿವೆ.

ಸಾಹಿತ್ಯ ಸ್ಪರ್ಧೆ ಬಹುಮಾನಿತ ಲೇಖನ

# ಸುವರ್ಣ ಕರ್ನಾಟಕ: ಸವಿನೆನಪಿನ ಹಿಂದಿನ ಕಠೋರ ವಾಸ್ತವಗಳು

◆ ನಾ. ದಿವಾಕರ



ಅಖಂಡ ಕರ್ನಾಟಕದ ಕನಸನ್ನು ಸಾಕಾರಗೊಳಿಸುವ ಮಹದಾಸೆಯನ್ನು ಬೆನ್ನತ್ತಿ, ೧೯೫೬ರ ನವೆಂಬರ್ ೧ರಂದು ಉದಯಿಸಿದ ಕರ್ನಾಟಕಕ್ಕೆ ಈಗ ಐವತ್ತು ವರ್ಷಗಳ ಸಂಭ್ರಮ. ಸುವರ್ಣ ಮಹೋತ್ಸವದ ಈ ಸಂದರ್ಭ ಪ್ರತಿಯೊಬ್ಬ ಕನ್ನಡಿಗನಿಗೂ ಹೆಮ್ಮೆ ತರುವಂತಹುದು. ಜೊತೆಯಲ್ಲೇ ಆತ್ಮಾವಲೋಕನದ ಸಂದರ್ಭವೂ ಹೌದು. ಸ್ವತಂತ್ರ ಭಾರತದಲ್ಲಿ ಹಲವಾರು ರಾಜ್ಯಗಳಲ್ಲಿ ಹರಿದು ಹಂಚಿಹೋಗಿದ್ದ ಕರ್ನಾಟಕದ ವಿವಿಧ ಪ್ರಾಂತ್ಯಗಳು, ಭಾಷಾವಾರು ರಾಜ್ಯಗಳ ಸ್ಥಾಪನೆಯಾದಾಗ ಒಂದಾಗಿದ್ದು ಸುಲಭವಾದ ಪ್ರಕ್ರಿಯೆಯಾಗಿರಲಿಲ್ಲ. ಒಂದೆಡೆ ಹೈದರಾಬಾದ್ ಕರ್ನಾಟಕ, ಇನ್ನೊಂದೆಡೆ ಮುಂಬೈ ಕರ್ನಾಟಕ, ಇತ್ತ ಕಾಸರಗೋಡು... ಹೀಗೆ ಹಲವಾರು ಸಮಸ್ಯೆಗಳನ್ನು ಮಡಿಲಲ್ಲಿಟ್ಟುಕೊಂಡು, ಹಲವಾರು ಮಹಾನ್ ಚೇತನಗಳ ಆಶೋತ್ತರಗಳ ಸಾಕಾರವಾಗಿ, ಹೋರಾಟಗಳ ಪ್ರತಿಫಲವಾಗಿ ಸಂಭವಿಸಿದ ಕರ್ನಾಟಕ ಏಕೀಕರಣ ಕನ್ನಡಿಗರ ಸಾಂಸ್ಕೃತಿಕ ಉನ್ನತಿಗೆ ನಾಂದಿಯಾಯಿತು. ಇಂದು ಆರು ಕೋಟಿ ಜನಸಂಖ್ಯೆ ಹೊಂದಿರುವ ಕರ್ನಾಟಕ ರಾಜ್ಯ, ಬಹುತೇಕ ಎಲ್ಲಾ ಕ್ಷೇತ್ರಗಳಲ್ಲೂ ತನ್ನ ಪ್ರಭಾವವನ್ನು ಅಂತಾರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ದಿದೆ. ಸಾಹಿತ್ಯದಲ್ಲಿ ಏಳು

ಜ್ಞಾನಪೀಠ ಪ್ರಶಸ್ತಿ, ಸಿನಿಮಾ ರಂಗದಲ್ಲಿ ಅಂತಾರಾಷ್ಟ್ರೀಯ ಮನ್ನಣೆ, ಜನಪದದಲ್ಲಿ ವಿಶ್ವಮಾನ್ಯತೆ, ವಿಜ್ಞಾನ ರಂಗದಲ್ಲಿ ಅಪ್ರತಿಮ ಸಾಧನೆ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಕರ್ನಾಟಕ ಒಂದು ಸಾಂಸ್ಕೃತಿಕ ಜನದನಿಯಾಗಿ ೫೦ ವರ್ಷ ಪೂರೈಸಿದೆ. ಸುವರ್ಣ ಕರ್ನಾಟಕದ ಸಂಭ್ರಮಾಚರಣೆಯೆಂದರೆ, ಕೇವಲ ಘೋಷಣೆ, ಭಾಷಣಗಳಾಗದೆ, ಕನ್ನಡ ನಾಡಿನ ಜನತೆಯ ಮನಸ್ಸು-ಹೃದಯಗಳ ಸಾಂಸ್ಕೃತಿಕ ಸಮ್ಮಿಲನವಾದಲ್ಲಿ, ಹೆಚ್ಚು ಸಾರ್ಥಕತೆ ಪಡೆದೀತು.

ಈ ಸಂದರ್ಭದಲ್ಲಿ ಭಾವುಕತೆಗೊಳಗಾಗದೆ, ಅಭಿಮಾನವೆಂಬ ಪಂಜರದಲ್ಲಿ ಸಿಲುಕದೆ, ಕನ್ನಡಿಗರ ನಾಡು, ನುಡಿ, ಕಲೆ, ಸಂಸ್ಕೃತಿ, ಸಾಹಿತ್ಯ, ರಾಜಕೀಯ, ಆರ್ಥಿಕತೆ, ಸಾಮಾಜಿಕ ನೆಲೆಗಳು ಮತ್ತು ಅಭಿವೃದ್ಧಿಯ ಬಗ್ಗೆ ತೆರೆದ ಹೃದಯದಿಂದ, ಆತ್ಮಾವಲೋಕನ ಮಾಡಿಕೊಳ್ಳುವುದೆ ಕನ್ನಡಿಗರ ಅಗತ್ಯವಾಗಿದೆ. ಈ ನಿಟ್ಟಿನಲ್ಲಿ ೫೦ ವರ್ಷಗಳ ಇತಿಹಾಸವನ್ನು ವಿಶ್ಲೇಷಿಸಬಹುದು.

## ಆರ್ಥಿಕ ಅಭಿವೃದ್ಧಿ

ಕರ್ನಾಟಕ ಇತಿಹಾಸದ ವೈಶಿಷ್ಟ್ಯವೆಂದರೆ, ತಾನು ಜನಿಸಿದ ದಿನದಿಂದಲೂ ಸಮಸ್ಯೆಗಳನ್ನು ಎದುರಿಸುತ್ತಲೇ ಬಂದಿರುವುದು. ಬಂಡವಾಳಶಾಹಿ ಆರ್ಥಿಕತೆಯಲ್ಲಿ ಸಮತೋಲನವಾದ ಆರ್ಥಿಕ ಬೆಳವಣಿಗೆಯನ್ನು ಅಪೇಕ್ಷಿಸುವುದು ಸೂಕ್ತವಲ್ಲವಾದರೂ ಕರ್ನಾಟಕದಂಥ ಸಂಪದ್ಭರಿತ ರಾಜ್ಯಕ್ಕೆ ಈ ವಿದ್ಯಮಾನ ಹೊರತಾಗಬಹುದಿತ್ತು. ಪಶ್ಚಿಮ ಘಟ್ಟಗಳ ಅರಣ್ಯ ಪ್ರದೇಶ, ಕಾವೇರಿ, ಕೃಷ್ಣಾ ತುಂಗಭದ್ರಾ, ನೇತ್ರಾವತಿ, ಹೇಮಾವತಿ, ಘಟಪ್ರಭಾ, ಮಲಪ್ರಭಾ ಮುಂತಾದ ನದಿಗಳು, ಅತ್ಯುತ್ತಮ ನೈಸರ್ಗಿಕ ಸಂಪತ್ತುಳ್ಳ ಬೆಟ್ಟ-ಗುಡ್ಡಗಳು ಮತ್ತು ಅಮೂಲ್ಯ ಖನಿಜಗಳುಳ್ಳ ಗಣಿಗಳು ಕರ್ನಾಟಕದಲ್ಲಿವೆ. ಹಾಗಾಗಿಯೇ ಅಲ್ಲವೇ ಕನ್ನಡ ನಾಡನ್ನು ಕವಿವರ್ಯರು 'ಚಿನ್ನದ ನಾಡಿದು ಗಂಧದ ಬೀಡಿದು' ಎಂದು ಹಾಡಿ ಹೊಗಳಿದ್ದು? ಆದರೆ, ದಂತದ ಅರಮನೆಯಿಂದ ಹೊರಬಂದು, ವಾಸ್ತವ ಲೋಕದಲ್ಲಿ ಕಣ್ಣು ನೆಟ್ಟಾಗ ಕವಿವಾಣಿ ಅರ್ಥವನ್ನೇ ಕಳೆದುಕೊಂಡು ಬಿಡುವುದೇನೋ ಎಂದು ಭಾಸವಾಗುತ್ತದೆ.

ಒಂದು ಕಾಲದಲ್ಲಿ ಆರು ತಿಂಗಳ ಕಾಲ ಎಡೆಬಿಡದ ವರ್ಷಧಾರೆಯ ಸುಖವನ್ನು ಅನುಭವಿಸುತ್ತಿದ್ದ ಮಲೆನಾಡು ಇಂದು ಬಯಲುಸೀಮೆಯಂತಾಗಿದೆ. ವನ್ಯಮೃಗಗಳ ತಾಣವಾಗಿದ್ದ ಎಲ್ಲೆಡೆ ದಟ್ಟ ಅಡವಿಗಳ ಸುಂದರ ತಾಣವಾಗಿದ್ದ ಪಶ್ಚಿಮ ಘಟ್ಟಗಳು ಬೆಂಗಾಡುಗಳಾಗುತ್ತಿವೆ. ರಸಋಷಿ ಕುವೆಂಪುರವರ ಕಾವ್ಯ ಸ್ಫೂರ್ತಿಯಾಗಿದ್ದ ಮಲೆನಾಡಿನ ರಮ್ಯತಾಣಗಳು ಇಂದು ಧನದಾಹಿಗಳ ವಶವಾಗುತ್ತಿವೆ. ಅತ್ಯಮೂಲ್ಯ ಔಷಧೀಯ ಸಸ್ಯಗಳಿಗೆ ತಾಣವಾಗಿದ್ದ ಅರಣ್ಯಗಳು ಕಾರ್ಪೊರೇಟ್ ಸಂಸ್ಕೃತಿಗೆ ಬಲಿಯಾಗುತ್ತಿವೆ. ರಾಮನಗರ, ಕೋಲಾರ, ಚಿತ್ರದುರ್ಗ ಮುಂತಾದೆಡೆಗಳಲ್ಲಿರುವ ಬೆಟ್ಟ ಗುಡ್ಡಗಳು, ಕಲ್ಲು ಬಂಡೆಗಳು ಗ್ರ್ಯಾನೈಟ್ ದಾಹಕ್ಕೆ ಬಲಿಯಾಗುತ್ತಿವೆ. ಪ್ರಾಣಿಗಳು, ತೇಗ, ಗಂಧದ ಮರಗಳು ಮರಗಳ್ಳರ ವಶವಾಗುತ್ತಿವೆ. ಅಗೋಚರ ವೀರಪ್ಪನ್‌ಗಳು ಆನೆಗಳ ಸಂತತಿಯನ್ನೇ ವಿನಾಶದ ಅಂಚಿಗೆ ಕರೆದೊಯ್ಯುತ್ತಿದ್ದಾರೆ. ಇವೆಲ್ಲದರ ನಡುವೆ ಬಂಡವಾಳಶಾಹೀ ಆರ್ಥಿಕ ನೀತಿಯ ಪರಿಣಾಮವಾಗಿ ಪ್ರಾದೇಶಿಕ ಅಸಮತೋಲನ ಹೆಚ್ಚಾಗುತ್ತಲೇ ಇದೆ. ೫೦ ವರ್ಷಗಳ ಹಿಂದೆ ಹೈದರಾಬಾದ್ ಕರ್ನಾಟಕ ಮತ್ತು ಉತ್ತರ ಕರ್ನಾಟಕದ ಜನರಲ್ಲಿದ್ದ ಅಸಮಾಧಾನದ ಹೊಗೆ ನಂದಿಲ್ಲ, ಈಗ ಪ್ರತ್ಯೇಕತೆಯ ಕೂಗೂ ಕೇಳಿಬರುತ್ತಿದೆ. ಬೆಳಗಾವಿ, ಕಾಸರಗೋಡು ಮತ್ತು ಇತರ ಗಡಿನಾಡ ಸಮಸ್ಯೆಗಳು, ಸಮಸ್ಯೆಗಳಾಗಿಯೇ ಉಳಿದಿವೆ. ಆಳುವ

ವರ್ಗಗಳ ಪರಿಭಾಷೆ ಭಾಷೆ, ಗಡಿಗಳನ್ನಾಧರಿಸಿರುವುದೇ ಹೊರತು, ಅಭಿವೃದ್ಧಿಯನ್ನಾಧರಿಸಿಲ್ಲ. ಕನ್ನಡಿಗರ ಸಂಸ್ಕೃತಿಯ ಬಗ್ಗೆ ಪುಂಖಾನುಪುಂಖವಾಗಿ ಮಾತನಾಡುವ ನಾವು ಸಾಂಸ್ಕೃತಿಕವಾಗಿ ಎಲ್ಲೋ ಸಮಾಜೋ-ಆರ್ಥಿಕ ಭಾವೈಕ್ಯವನ್ನು ಕಳೆದುಕೊಂಡಿದ್ದೇವೆಂದೆನಿಸುತ್ತದೆ.

ಈ ಬೆಳವಣಿಗೆಗಳಿಗೆ ಆಳುವ ವರ್ಗಗಳ ನಿರ್ಲಕ್ಷ್ಯ ಮತ್ತು ಬಂಡವಾಳಶಾಹಿ ಆರ್ಥಿಕ ನೀತಿಗಳೇ ಕಾರಣ. ಪ್ರಾರಂಭದಿಂದಲೂ ಅಭಿವೃದ್ಧಿ ಬೆಂಗಳೂರು ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿಯೇ ಕೇಂದ್ರೀಕೃತವಾಗಿರುವುದು ಆರ್ಥಿಕ-ಸಾಮಾಜಿಕ ಅಸಮತೋಲನಕ್ಕೆ ನಾಂದಿಯಾಗಿದೆ. ಪರಿಣಾಮವಾಗಿ ರಾಜ್ಯದ ಒಂದು ಭಾಗದ ಜನತೆ ಅಸಮಾಧಾನ ಹೊಂದಿರುವುದು ಸಹಜವೇ ಆಗಿದೆ. ಸ್ವಾತಂತ್ರ್ಯಾನಂತರ ಸ್ಥಾಪಿತವಾದ ಭಾರೀ ಸಾರ್ವಜನಿಕ ಉದ್ದಿಮೆಗಳೂ ಸಹ ಬೆಂಗಳೂರು ಕೇಂದ್ರಿತವಾದದ್ದು ಇಲ್ಲಿ ಗಮನಾರ್ಹ. ಏಕೀಕರಣದ ನಂತರದಲ್ಲಿ ಒಂದು ವೈಜ್ಞಾನಿಕ ತಳಹದಿಯ ಯೋಜನಾ ಸ್ವರೂಪವನ್ನು ರಾಜ್ಯಕ್ಕೆ ನೀಡುವಲ್ಲಿ ಆಳುವ ವರ್ಗಗಳು ವಿಫಲರಾಗಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯಪೂರ್ವದಲ್ಲಿ ಕರ್ನಾಟಕ ಭೌಗೋಳಿಕವಾಗಿ ಒಂದು ರಾಜ್ಯವಾಗಿ ಪರಿಗಣಿಸಲ್ಪಡುತ್ತಿದ್ದರೂ ಆರ್ಥಿಕ, ಸಾಮಾಜಿಕವಾಗಿ ವಿಭಿನ್ನ ಪ್ರಾಂತ್ಯಗಳ ಸಮಾಜೋ-ಆರ್ಥಿಕತೆಗಳಿಂದ ಪ್ರಭಾವಿತವಾಗಿತ್ತು. ನಿಜಾಮನ ಆಡಳಿತದ ಹೈದರಾಬಾದ್ ಕರ್ನಾಟಕದಲ್ಲಿದ್ದ ಸಾಮಾಜಿಕ ಪರಿಸ್ಥಿತಿ, ಮುಂಬೈ ಕರ್ನಾಟಕದ ಪ್ರಾಂತ್ಯಗಳಲ್ಲಿ ಕಂಡುಬರುತ್ತಿರಲಿಲ್ಲ. ಕನ್ನಡದ ಕಂಪು ಕಾವೇರಿಯಿಂದ ಗೋದಾವರಿಯವರೆಗೆ ಹರಡಿದ್ದರೂ ಜೀವನ ಶೈಲಿ ಹಾಗೂ ಮಟ್ಟದಲ್ಲಿ ವೈವಿಧ್ಯತೆ ಕಂಡುಬರುತ್ತಿದ್ದವು. ಹಾಗಾಗಿ ಏಕೀಕರಣದ ನಂತರ ರಾಜ್ಯದ ಸರ್ವತೋಮುಖ ಅಭಿವೃದ್ಧಿಯ ನೀಲನಕ್ಷೆ ತಯಾರಿಸುವ ಹಂತದಲ್ಲಿ ಎಲ್ಲಾ ಪ್ರಾಂತ್ಯಗಳ ವಾಸ್ತವ ಸ್ಥಿತಿಗತಿಗಳನ್ನು ಗಣನೆಗೆ ತೆಗೆದುಕೊಂಡು ರಾಜ್ಯವನ್ನು ಮುನ್ನಡೆಸಬೇಕಿತ್ತು.

ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಇಡೀ ಭಾರತದಲ್ಲಿ ಬೇರು ಬಿಟ್ಟ ಊಳಿಗಮಾನ್ಯ ಪದ್ಧತಿ ಕರ್ನಾಟಕಕ್ಕೂ ಹೊರತಾಗಿರಲಿಲ್ಲ. ಮೈಸೂರು ಅರಸರು ಆಳಿದ ಪ್ರದೇಶಗಳಲ್ಲಿ, ಪ್ರಜಾತಾಂತ್ರಿಕ ನೀತಿಗಳ ಫಲವಾಗಿ ಈ ಪದ್ಧತಿ ಬೇರೂರಿರಲಿಲ್ಲ. ಟಿಪ್ಪು ಸುಲ್ತಾನನಿಂದ ಹಿಡಿದು ಕೃಷ್ಣರಾಜ ಒಡೆಯರ್‌ವರೆಗೆ ಬಹುತೇಕ ಮೈಸೂರು ಅರಸರು, ಹಿಂದುಳಿದ ಜನಾಂಗಗಳಿಗೆ, ಭೂಮಿಯನ್ನು ಪರಭಾರೆ ಮಾಡುವಲ್ಲಿ ಯಶಸ್ವಿಯಾಗಿದ್ದರು. ಆದಾಗ್ಯೂ ಕಾವೇರಿ ತೀರದಲ್ಲಿದ್ದ ಮೈಸೂರು ಮತ್ತು ಸುತ್ತಲ ಸೀಮೆಯ ಊರುಗಳು, ದಕ್ಷಿಣಾತ್ಯ ಜಿಲ್ಲೆಗಳಾದ ಕೋಲಾರ, ತುಮಕೂರು ಮುಂತಾದ ಜಿಲ್ಲೆಗಳಿಗಿಂತಲೂ ಸುಭಿಕ್ಷವಾಗಿದ್ದವು. ಆದರೆ ನಿಜಾಮನ ಆಳ್ವಿಕೆಯಲ್ಲಿದ್ದ ಹೈದರಾಬಾದ್ ಕರ್ನಾಟಕವಾಗಲೀ, ಪೇಶ್ವೆಗಳ ಆಳ್ವಿಕೆಯಲ್ಲಿದ್ದ ಮುಂಬೈ ಪ್ರಾಂತ್ಯವಾಗಲೀ, ಊಳಿಗಮಾನ್ಯ ಪದ್ಧತಿಯಿಂದ ಬಿಡುಗಡೆ ಹೊಂದಿರಲಿಲ್ಲ. ಇತ್ತ ಮೈಸೂರು ಪ್ರಾಂತ್ಯವೂ ಸಹ ಈ ಊಳಿಗಮಾನ್ಯ ಪದ್ಧತಿಯಿಂದಾಗಲೀ, ಸಾಮಾಜಿಕ, ಆರ್ಥಿಕ ಶೋಷಣೆಯಿಂದಾಗಲೀ ಸಂಪೂರ್ಣವಾಗಿ ಮುಕ್ತವಾಗಲಿಲ್ಲ.

ಕರ್ನಾಟಕದ ನಕ್ಷೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕಂಡುಬರುವ ಅಂಶವೆಂದರೆ, ರಾಜ್ಯದ ಪ್ರಮುಖ ನದಿಗಳಾದ ಕಾವೇರಿ, ಕೃಷ್ಣ, ಭೀಮ ಮತ್ತು ತುಂಗಾ ನದಿಗಳು ಕೇವಲ ಗುಲ್ಬರ್ಗ, ರಾಯಚೂರು, ಬಿಜಾಪುರ, ಬೆಳಗಾವಿ, ಇಂದಿನ ಬಾಗಲಕೋಟೆ ಮತ್ತು ಕೊಪ್ಪಳ, ಬಳ್ಳಾರಿ, ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಮಾತ್ರ ಹರಿಯುತ್ತವೆ. ಹಾಗಾಗಿ ಈ ಜಿಲ್ಲೆಗಳಲ್ಲಿ ಫಲವತ್ತಾದ ನೀರಾವರಿಯುಕ್ತ ಭೂಮಿಯನ್ನು ನೋಡಬಹುದು. ಈ ಜಿಲ್ಲೆಗಳನ್ನು ಹೊರತುಪಡಿಸಿ, ಕೋಲಾರ,

ತುಮಕೂರು, ಬೀದರ, ಗದಗ, ಹಾವೇರಿ, ಇಂದಿನ ದಾವಣಗೆರೆ ಮುಂತಾದ ಜಿಲ್ಲೆಗಳಲ್ಲಿ ಮಳೆಯನ್ನಾಧರಿಸಿಯೇ ಕೃಷಿಕರು ತಮ್ಮ ಅಭಿವೃದ್ಧಿ ಪಥ ಅರಸಬೇಕಿತ್ತು. ಸ್ವಾತಂತ್ರ್ಯಾನಂತರದ ಭಾರತದಲ್ಲಿ, ದೇಶದ ಸರ್ವತೋಮುಖ ಅಭಿವೃದ್ಧಿಗೆ ಕೃಷಿ ಮತ್ತು ಕೈಗಾರಿಕೆ ಇವೆರಡರಲ್ಲಿ ಯಾವುದನ್ನು ಆಧರಿಸಿರಬೇಕೆಂಬುದರ ಬಗ್ಗೆ ಗಂಭೀರವಾದ ಚರ್ಚೆಗಳು ನಡೆದವು. ಕರ್ನಾಟಕದಲ್ಲೂ ಇದರ ಛಾಪು ಮೂಡದಿರಲಿಲ್ಲ. ಶೇ. ೭೦ರಷ್ಟು ಕೃಷಿಯನ್ನಾಧರಿಸಿರುವ ದೇಶದಲ್ಲಿ ಕೃಷಿಯೇ ಪ್ರಧಾನ. ಕೈಗಾರೀಕರಣದಿಂದ ದೇಶದ ಅಭಿವೃದ್ಧಿ ಸಾಧ್ಯವಿಲ್ಲ ಎಂಬ ವಾದ ಒಂದೆಡೆಯಾದರೆ, ನೆಹರೂ ಮುಂತಾದ ನೇತಾರರು ಕೈಗಾರೀಕರಣದಿಂದಲೇ ದೇಶದ ಶೀಘ್ರ ಅಭಿವೃದ್ಧಿ ಸಾಧ್ಯ ಎಂದು ವಾದಿಸಿದ್ದರು. ವಸಾಹತು ಶಾಹಿ ಅಂತ್ಯಗೊಂಡ ನಂತರದಲ್ಲಿ ಬಂಡವಾಳಶಾಹಿ ಪದ್ಧತಿಯನ್ನು ಕೈಬಿಡದೆ, ಸಮಾಜವಾದೀ ಸಿದ್ಧಾಂತಗಳಿಗೆ ಜೋತು ಬಿದ್ದ ಸರ್ಕಾರಗಳು, ಎರಡೂ ಕ್ಷೇತ್ರಗಳನ್ನು ಸರಿಸಮಾನವಾಗಿ ಅಭಿವೃದ್ಧಿಗೊಳಿಸುವ ವ್ಯವಸ್ಥೆಯನ್ನು ರೂಪಿಸಿದವು.

ಇನ್ನೊಂದೆಡೆ ಕೃಷಿ ಕ್ಷೇತ್ರದಲ್ಲಿ ಪ್ರಚಲಿತವಾಗಿದ್ದ ಊಳಿಗಮಾನ್ಯ ಪದ್ಧತಿಯನ್ನು ತೊಡೆದು ಹಾಕುವ ನಿಟ್ಟಿನಲ್ಲಿ ಭೂಸುಧಾರಣೆಯನ್ನು ಕರ್ನಾಟಕ ಸರ್ಕಾರಗಳು ಕೈಗೊಳ್ಳಲೇ ಇಲ್ಲ. ೭೦ರ ದಶಕದಲ್ಲಿ ದೇವರಾಜ ಅರಸುರವರ ಕ್ರಾಂತಿಕಾರೀ ನಿರ್ಧಾರಗಳಿಂದ ರಾಜ್ಯದಲ್ಲಿ ಕೊಂಚ ಮಟ್ಟಿಗೆ ಭೂ ಸುಧಾರಣೆ ಅನುಷ್ಠಾನಗೊಂಡಿತೆಂದು ಹೇಳಬಹುದು. ಆಗಲೂ ಸಹ ಇಡೀ ರಾಜ್ಯದಲ್ಲಿ ಏಕ ಪ್ರಕಾರವಾಗಿ ಭೂ ಸುಧಾರಣೆ ಆಗಲಿಲ್ಲ. ಜಮೀನ್ದಾರಿ ಪದ್ಧತಿ ಪ್ರಬಲವಾಗಿದ್ದ ಉತ್ತರ ಕರ್ನಾಟಕದ ಕೆಲವು ಪ್ರಾಂತ್ಯಗಳಲ್ಲಿ ಬೇನಾಮಿ ಜಮೀನ್ದಾರಿಕೆ ಪ್ರಾರಂಭವಾಯಿತು. ನಂತರ ಬಂದ ಸರ್ಕಾರಗಳೂ ಈ ನಿಟ್ಟಿನಲ್ಲಿ ಯಾವುದೇ ಸಕಾರಾತ್ಮಕ ಕ್ರಮ ಕೈಗೊಳ್ಳದಿದ್ದುದರಿಂದ, ಅರಸುರವರ ಕಾಲದ ಭೂ ಸುಧಾರಣೆ ಅಲ್ಲಿಗೇ ಪರಿಸಮಾಪ್ತಿಯಾಯಿತು. ತದನಂತರ ೯೦ರ ದಶಕದ ನಂತರದಲ್ಲಿ ಭಾರತೀಯ ಆರ್ಥಿಕತೆಯಲ್ಲಿ ಕಂಡುಬಂದ ತೀವ್ರತರದ ಬದಲಾವಣೆಗಳು ಕರ್ನಾಟಕವನ್ನೂ ತಟ್ಟದಿರಲಿಲ್ಲ. ಜಾಗತೀಕರಣದ ಪ್ರಭಾವದಿಂದ, ಕೃಷಿ ಮತ್ತು ಕೈಗಾರಿಕೆಗಳನ್ನು ವ್ಯವಸ್ಥಿತವಾಗಿ ನಿರ್ಲಕ್ಷಿಸಲಾಯಿತು. ಕೃಷಿ ಕ್ಷೇತ್ರದಲ್ಲಿ ವಾಣಿಜ್ಯ ಬೆಳೆಗಳನ್ನು ಉತ್ತೇಜಿಸುವ ಸಲುವಾಗಿ ಬಹು ರಾಷ್ಟ್ರೀಯ ಕಂಪನಿಗಳಿಗೆ ಕೆಂಪು ಕಂಬಳಿಯ ಸ್ವಾಗತ ನೀಡಲಾಯಿತು. ಸಾರ್ವಜನಿಕ ಬೃಹತ್ ಉದ್ದಿಮೆಗಳ ತವರು ಮನೆಯಂತಿದ್ದ ಬೆಂಗಳೂರು ಐ.ಟಿ.-ಬಿ.ಟಿ.ಗಳ ಮುಖ್ಯ ಕಚೇರಿಯಾಗಿ ಪರಿವರ್ತನೆಗೊಳ್ಳಲು ಹೆಚ್ಚು ಸಮಯ ಬೇಕಾಗಲಿಲ್ಲ. ಇತ್ತ ಸರ್ಕಾರದ ನಿರ್ಲಕ್ಷ್ಯದಿಂದ ಸಾರ್ವಜನಿಕ ಉದ್ದಿಮೆಗಳು ನಷ್ಟ ಅನುಭವಿಸತೊಡಗಿದವು. ಬೆಂಗಳೂರನ್ನು ಸಿಂಗಾಪೂರ ಮಾಡುವ ದೂರ(ದುರ)ದೃಷ್ಟಿಯಿಂದ ಈ ಆಧುನಿಕ ಭಾರತದ ದೇವಾಲಯಗಳ ಬಾಗಿಲುಗಳು ಶಾಶ್ವತವಾಗಿ ಮುಚ್ಚಿದ್ದು ಸರ್ಕಾರಗಳ ಕಣ್ಣಿಗೆ ಬೀಳಲೇ ಇಲ್ಲ.

ಇಂದು ಐಟಿ-ಬಿಟಿ ಕ್ಷೇತ್ರದಲ್ಲಿ ಲಕ್ಷಾಂತರ ಯುವಕರಿಗೆ ನೌಕರಿ ದೊರೆಯುತ್ತಿದೆ ಎಂದು ಎಷ್ಟೇ ಅಂಕಿ ಅಂಶಗಳನ್ನು ನೀಡಿದರೂ, ಈ ನೌಕರಿ ದೊರೆಯುತ್ತಿರುವುದು ಸಮಾಜದ ಉನ್ನತ ವರ್ಗದ ಹಲವರಿಗೆ ಮಾತ್ರ ಎಂಬ ಕಟು ಸತ್ಯವನ್ನು ಮರೆಯುವಂತಿಲ್ಲ. ಶಿಕ್ಷಣ ಕ್ಷೇತ್ರದಲ್ಲಿ ಹೊರತುಪಡಿಸಿ ಬೇರಾವ ಕ್ಷೇತ್ರದಲ್ಲೂ ಸರ್ಕಾರಿ ನೇಮಕಾತಿ ನಡೆಯುತ್ತಿಲ್ಲವೆಂಬ ಕಟುವಾಸ್ತವದ ಹಿನ್ನೆಲೆಯಲ್ಲೇ, ವಿದ್ಯುಚ್ಛಕ್ತಿ, ಸಾರಿಗೆ ಮತ್ತು ಉನ್ನತಶಿಕ್ಷಣ ಕ್ಷೇತ್ರವನ್ನು ಖಾಸಗೀಕರಣಗೊಳಿಸುತ್ತಿರುವುದು. ನಿರುದ್ಯೋಗ. ಸಮಸ್ಯೆಯನ್ನು ತೀವ್ರವಾಗಿಸುತ್ತಿದೆ. ಇತ್ತ ಕೃಷಿ ಕ್ಷೇತ್ರದಲ್ಲಿ ಜಾಗತೀಕರಣದ ಪ್ರಭಾವದಿಂದ ಬಿಕ್ಕಟ್ಟು ತೀವ್ರವಾಗುತ್ತಿದ್ದು, ಕಳೆದ ಹತ್ತು ವರ್ಷಗಳಲ್ಲಿ ರಾಜ್ಯದಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ರೈತರು

ಸಾಲದ ಬಾಧೆ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಕೇವಲ ಶ್ರೀಮಂತ ಹಾಗೂ ಮಧ್ಯಮ ವರ್ಗದ ರೈತರಿಗೆ ಅನುಕೂಲವಾಗುವಂತಹ ಯೋಜನೆಗಳನ್ನೇ ಹಮ್ಮಿಕೊಳ್ಳುತ್ತಿರುವ ಸರ್ಕಾರಗಳು ಕೃಷಿ ಕಾರ್ಮಿಕರ ಬಗ್ಗೆ, ಸಣ್ಣ ಮತ್ತು ಅತಿ ಸಣ್ಣ ರೈತರ ಬಗ್ಗೆ ಕಾಳಜಿ ತೋರದೆ ನಿಷ್ಕ್ರಿಯವಾಗಿವೆ. ಪರಿಣಾಮವಾಗಿ ಕೃಷಿ ಕಾರ್ಮಿಕರ ವಲಸೆ ಪರಾಕಾಷ್ಠೆ ತಲುಪುತ್ತಿದ್ದು ರೈತ ಹಾಗೂ ಕೃಷಿ ಕಾರ್ಮಿಕರ ಬದುಕು ಹೀನಾಯ ಸ್ಥಿತಿ ತಲುಪುತ್ತಿದೆ.

ಬಂಡವಾಳಶಾಹಿ ಬೆಳವಣಿಗೆಯ ಪರಿಧಿಯಲ್ಲೇ, ಪ್ರಭುತ್ವ ಸಮಾಜವಾದ(State Socialism) ನೆರಳಲ್ಲಿ ಸ್ವಲ್ಪವಾದರೂ ಬೆಳಕು ಕಾಣುತ್ತಿದ್ದ ರಾಜ್ಯದ ಜನತೆಯ ಬದುಕು ಜಾಗತೀಕರಣದ ಸುನಾಮಿ ಅಲೆಗಳಿಗೆ ಸಿಲುಕಿ ಪರದಾಡುತ್ತಿರುವುದು, ಸುವರ್ಣ ಕರ್ನಾಟಕದ ಸಂದರ್ಭದಲ್ಲಿ ಚಿಂತೆಗೀಡುಮಾಡುವ ವಿಷಯವೇ.

## ಸಾಮಾಜಿಕ ಸ್ಥಿತ್ಯಂತರ

ರಾಜ್ಯದ ಸಾಮಾಜಿಕ ಸ್ಥಿತಿ-ಗತಿಗಳನ್ನು ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಚಳುವಳಿಗಳು ಎಂಬ ಎರಡು ಮಜಲುಗಳಲ್ಲಿ ವಿಶ್ಲೇಷಿಸಬಹುದು. ಸ್ವಾತಂತ್ರ್ಯ ಪೂರ್ವದಿಂದಲೂ ಕರ್ನಾಟಕವು ಸಾಮಾಜಿಕ ನ್ಯಾಯಕ್ಕೆ ಹೆಸರು ಗಳಿಸಿರುವುದು ಹೆಮ್ಮೆಯ ಸಂಗತಿ. ಪರಿಶಿಷ್ಟ ಜಾತಿ ಮತ್ತು ಹಿಂದುಳಿದ ಜಾತಿಗಳಿಗೆ, ಮೀಸಲಾತಿ ಮುಂತಾದ ಸವಲತ್ತುಗಳನ್ನು ನೀಡುವಲ್ಲಿ ಕರ್ನಾಟಕ ಮಹಾರಾಜರ ಕಾಲದಿಂದಲೂ ಛಾಪು ಮೂಡಿಸಿದೆ. ಉತ್ತರ ಭಾರತದಲ್ಲಿ ವಿಶೇಷವಾಗಿ Cow belt ಎಂದು ಹೇಳಲಾಗುವ ರಾಜ್ಯಗಳಲ್ಲಿ ಈ ಸಂಗತಿಯನ್ನು ಊಹಿಸಲೂ ಸಾಧ್ಯವಿಲ್ಲ. ಹಾಗಾಗಿಯೇ ಇಲ್ಲಿ 'ಅಹಿಂದ'ದಂತಹ ಸಂಘಟನೆಗಳು ಪರಿಣಾಮ ಬೀರುವುದಿಲ್ಲ. ಜಾತಿ ಘರ್ಷಣೆಗಳು ಕಂಡುಬಂದರೂ, ಉತ್ತರ ಭಾರತದಂತೆ ಜಾತಿ ಆಧಾರಿತ ಚಳುವಳಿಗಳು ಯಶಸ್ಸು ಕಾಣುವುದಿಲ್ಲ. ಆದರೆ ಉತ್ತರ ಕರ್ನಾಟಕದಲ್ಲಿ ಪರಿಸ್ಥಿತಿ ಭಿನ್ನ. ನಿಜಾಮರ ಮತ್ತು ಪೇಶ್ವೆಗಳ ಆಡಳಿತಕ್ಕೊಳಪಟ್ಟಿದ್ದ ಆ ಪ್ರಾಂತ್ಯಗಳಲ್ಲಿ ಇಂದಿಗೂ ಭೂ ಮಾಲೀಕರ ದೌರ್ಜನ್ಯ, ದಬ್ಬಾಳಿಕೆ ಮುಂದುವರೆದಿದೆ.

ಟಿಪ್ಪು ಕಾಲದಿಂದಲೂ ಕರ್ನಾಟಕದಲ್ಲಿ ಹಿಂದುಳಿದ ಜಾತಿಗಳಿಗೆ ಮತ್ತು ಅಲ್ಪಸಂಖ್ಯಾತರಿಗೆ ಸಾಮಾಜಿಕ ನ್ಯಾಯದ ಪ್ರತಿಫಲ ದೊರೆಯುತ್ತಲೇ ಇದೆ. ನೂರು ವರ್ಷಗಳ ಹಿಂದೆಯೇ ಒಡೆಯರ ಆಳ್ವಿಕೆಯಲ್ಲಿ ದಲಿತರಿಗೆ ಸರ್ಕಾರಿ ನೌಕರಿಯಲ್ಲಿ ಮೀಸಲಾತಿ ನೀಡುವ ಮೂಲಕ ಕರ್ನಾಟಕ ತನ್ನದೇ ಆದ ಪರಂಪರೆ ಹೊಂದಿದೆ. ಆದಾಗ್ಯೂ ಮಹಾರಾಷ್ಟ್ರದ ನಂತರ ದಲಿತ ಚಳುವಳಿ ತನ್ನ ಬೇರುಗಳನ್ನು ಗಟ್ಟಿಗೊಳಿಸಿಕೊಂಡಿದ್ದು ಇಲ್ಲೇ ಎಂಬುದನ್ನು ಮರೆಯುವಂತಿಲ್ಲ. ಅರ್ಥಾತ್ ಅನ್ಯ ರಾಜ್ಯಗಳಿಗೆ ಹೋಲಿಸಿದಾಗ ಕೊಂಚ ಉತ್ತಮ ಎನಿಸಿದರೂ, ನಮ್ಮಲ್ಲೂ ದಲಿತರ ಮೇಲಿನ ದೌರ್ಜನ್ಯ ನಿಂತಿಲ್ಲ. ೭೦ರ ದಶಕದಲ್ಲಿ ಆರಂಭಗೊಂಡ ದಲಿತ ಚಳುವಳಿಗಳು ತನ್ನ ಸಾಂಸ್ಥಿಕ ನೆಲೆ ಕಂಡುಕೊಳ್ಳುವ ಮುನ್ನವೇ ವಿಘಟಿತವಾದ ಕಾರಣ ದಲಿತ ವಿಮೋಚನೆ ಇನ್ನೂ ಹೋರಾಟದ ಹಾಡುಗಳಲ್ಲೇ ಹುದುಗಿದೆ. ದೇವರಾಜ ಅರಸುರವರ ಕ್ರಾಂತಿಕಾರೀ ಭೂ ಸುಧಾರಣೆಗಳ ಫಲವಾಗಿ ಅನೇಕ ದಲಿತ ಹಿಂದುಳಿದ ಸಮುದಾಯಗಳು ಭೂಮಿ ಪಡೆದರೂ, ಇಂದು ಅದೇ ಹಿಂದುಳಿದ ವರ್ಗಗಳು ರಾಜಕೀಯವಾಗಿ ಪ್ರಬಲವಾಗಿದ್ದು ಜಾತಿ ವ್ಯವಸ್ಥೆ ಕಾಪಾಡುವತ್ತ ನಡೆದಿವೆ. ಇತರ ಹಿಂದುಳಿದ ಜಾತಿಗಳಿಗೆ ಉನ್ನತ ಶಿಕ್ಷಣದಲ್ಲಿ ಮೀಸಲಾತಿ ನೀಡುವ ವಿಷಯದಲ್ಲಿ ಇಡೀ ದೇಶದಲ್ಲಿ ಪ್ರತಿಭಟನೆ ನಡೆದರೂ, ಕರ್ನಾಟಕದಲ್ಲಿ ಅದರ ಕಾವು ಕಂಡುಬರಲಿಲ್ಲ. ಪ್ರತಿಭಟನೆ ನಡೆಸಿದವರಲ್ಲಿ ದಲಿತರೇ

ಹೆಚ್ಚಿನ ಸಂಖ್ಯೆಯಲ್ಲಿದ್ದುದನ್ನು ಗಮನಿಸಿದರೆ, ಓಬಿಸಿಗಳ ಸಾಮಾಜಿಕ ಅಭ್ಯುದಯ ಮತ್ತು ಆರ್ಥಿಕ ಮುನ್ನಡೆ ಅವರನ್ನು ವ್ಯವಸ್ಥೆಯೊಳಗೆ ಲೀನವಾಗಿಸಿರುವುದು ಸ್ಪಷ್ಟವಾಗುತ್ತದೆ.

ಆದರೆ ತುಂಗಭದ್ರಾ ನದಿ ಹರಿಯುವ, ರಾಯಚೂರು, ಗಂಗಾವತಿ, ಬಳ್ಳಾರಿ, ಕೊಪ್ಪಳ, ದಾವಣಗೆರೆ ಮುಂತಾದ ಜಿಲ್ಲೆಗಳಲ್ಲಿ, ಹಿಂದೊಮ್ಮೆ ಭೂಮಾಲೀಕರಾಗಿದ್ದ ಸ್ಥಳೀಯರು ಈಗ ಬಹುತೇಕ ಕೃಷಿ ಕಾರ್ಮಿಕರಾಗಿರುವುದನ್ನು ಕಾಣಬಹುದು. ಇದಕ್ಕೆ ಕಾರಣ ಆಂಧ್ರ ಪ್ರದೇಶದಿಂದ ವಲಸೆ ಬಂದಿರುವ ಶ್ರೀಮಂತ ಭೂಮಾಲೀಕ ವರ್ಗ. ಒಂದು ಕಡೆ ತುಂಗಭದ್ರಾ ಅಣೆಕಟ್ಟಿನ ಶೇ. ೭೦ರಷ್ಟು ನೀರನ್ನು ಆಂಧ್ರ ಪಡೆದರೆ, ಇನ್ನೊಂದೆಡೆ ಈ ಜಲಾಶಯದಿಂದ ನೀರಾವರಿ ಪಡೆದಿರುವ ಕರ್ನಾಟಕದ ಶೇ. ೭೦ರಷ್ಟು ಭೂಮಿಯನ್ನು ಆಂಧ್ರದ ರೈತರೇ ಪಡೆದಿದ್ದಾರೆ. ಹಾಗಾಗಿ ಈ ಪ್ರದೇಶದಲ್ಲಿ ಹಲವಾರು ರೀತಿಯ ಸಂಘರ್ಷಗಳನ್ನು ನಾವು ಕಾಣಬಹುದಾಗಿದೆ. ಜಾತಿ ಸಂಘರ್ಷ, ಕೃಷಿ ಕಾರ್ಮಿಕ-ಭೂಮಾಲೀಕರ ಸಂಘರ್ಷ, ಕಾರ್ಮಿಕ-ಮಾಲೀಕರ ಸಂಘರ್ಷ, ಅಸಮತೋಲನ ಅಭಿವೃದ್ಧಿಯನ್ನು ಪ್ರತಿಭಟಿಸಲು ಕರ್ನಾಟಕ ಸರ್ಕಾರದೊಡನೆ ಸಂಘರ್ಷ ಹೀಗೆ..

ಇನ್ನೊಂದೆಡೆ ಯಾವುದೇ ನೀರಾವರಿ ಸೌಲಭ್ಯವಾಗಲೀ, ಭಾರೀ ಕಾರ್ಖಾನೆಗಳಾಗಲೀ ಇಲ್ಲದ ಕೋಲಾರ ಮತ್ತು ತುಮಕೂರಿನಂತಹ ಜಿಲ್ಲೆಗಳಲ್ಲಿ ಜನರ ಸಾಮಾಜಿಕ ತಳಹದಿಯೇ ಭದ್ರತೆ ಕಳೆದುಕೊಳ್ಳುತ್ತಿದೆ. ಕೋಲಾರ ಚಿನ್ನದ ಗಣಿಯನ್ನು ಮುಚ್ಚಿದ ನಂತರ ಮೂರು ಲಕ್ಷ ಜನರ ಬದುಕು ದುಸ್ತರವಾಗಿದೆ. ಗಣಿ ಮುಚ್ಚಿದಲ್ಲಿ ಅಲ್ಲಿನ ಕಾರ್ಮಿಕರಿಗೆ ಅನುಕೂಲವಾಗಲೆಂದು ೬೦ರ ದಶಕದಲ್ಲಿ ನಿರ್ಮಿಸಲಾದ ಬಿಇಎಂಎಲ್‌ನಲ್ಲಿ ಇಂದು ಹೊರಗಿನವರೇ ಹೆಚ್ಚಾಗಿದ್ದು, ಅಲ್ಲಿನ ಸಾಮಾಜಿಕ ಸಂಘರ್ಷ, ಮೇಲ್ನೋಟಕ್ಕೆ ಕಾಣದಿದ್ದರೂ ದಿನೇದಿನೇ ತೀವ್ರ ಸ್ವರೂಪ ಪಡೆಯುತ್ತಿದೆ. ಕೋಲಾರ ಗಣಿಯ ವಿಡಂಬನೆ ಏನೆಂದರೆ ಅಲ್ಲಿ ನೆಲೆಸಿರುವ ಕಾರ್ಮಿಕರಲ್ಲಿ ಶೇ. ೯೦ರಷ್ಟು ತಮಿಳುನಾಡಿನಿಂದ ಮತ್ತು ಆಂಧ್ರದಿಂದ ವಲಸೆ ಬಂದವರು. ಮೊದಲನೆಯ ಪೀಳಿಗೆಯವರು ಬಹುತೇಕ ಅನಕ್ಷರಸ್ಥರಾಗಿದ್ದರಿಂದ ಅವರಲ್ಲಿ ಭಾಷಾ ಗೊಂದಲ ತೀವ್ರ ಮಟ್ಟಕ್ಕೆ ತಲುಪಿತ್ತು. ಇಂದಿನ ಯುವ ಜನಾಂಗ ಕನ್ನಡ ಬಳಸುತ್ತಾರಾದರೂ, ಬಹುಪಾಲು ತಮಿಳರಿರುವ ಈ ಪ್ರದೇಶದಲ್ಲಿ ತಮಿಳು ಪ್ರಮುಖ ಭಾಷೆಯಾಗಿದೆ. ಗಣಿ ಮುಚ್ಚಿರುವುದು ಒಂದೆಡೆಯಾದರೆ, ಸ್ಥಳೀಯವಾಗಿ ಯಾವುದೇ ಉದ್ಯೋಗ ದೊರೆಯುವುದಿಲ್ಲವಾದ್ದರಿಂದ, ಇಲ್ಲಿಂದ ಬೆಂಗಳೂರಿಗೆ ಪ್ರತಿದಿನ ಐದು ಸಾವಿರಕ್ಕೂ ಹೆಚ್ಚು ಯುವಕ ಯುವತಿಯರು ರೈಲಿನಲ್ಲಿ ಪ್ರಯಾಣ ಮಾಡುತ್ತಾರೆ. ಬಹುತೇಕ ದಿನಗೂಲಿ, ಕಟ್ಟಡ ಕಾಮಗಾರಿ, ಸಿದ್ಧ ಉಡುಪುಗಳ ಕಾರ್ಖಾನೆಗಳಲ್ಲಿ ದುಡಿಯುವ ಇವರಲ್ಲಿ ಕೆಲವೊಮ್ಮೆ ಟಿಕೆಟ್ ಕೊಳ್ಳಲೂ ಹಣ ಇರುವುದಿಲ್ಲ, ಹಾಗಾಗಿ ಕೆಲವೊಮ್ಮೆ ಇಡೀ ಮಾರಿಕುಪ್ಪಂ ರೈಲಿನಲ್ಲಿ ಟಿಕೆಟ್‌ರಹಿತ ಪ್ರಯಾಣಿಕರಿರುತ್ತಾರೆ. ತಪಾಸಣೆಗೆ ಬಂದಾಗ ಚೈನು ಎಳೆದು, ರೈಲು ನಿಲ್ಲಿಸಿ ಓಡಿ ಹೋಗುತ್ತಾರೆ. ಇಲ್ಲವಾದರೆ ಅಧಿಕಾರಿಗಳ ವಿರುದ್ಧ ಕೂಗಾಡಿಬಿಡುತ್ತಾರೆ. ಆದರೆ, ಕನ್ನಡ ನಾಡು ಚಿನ್ನದ ಬೀಡು ಎಂಬ ಹೆಗ್ಗಳಿಕೆಗೆ ಕಾರಣವಾದ ಈ ವರ್ಗದ ಪರವಾಗಿ ಇದುವರೆಗೂ ಯಾವುದೇ ಕನ್ನಡಪರ ಸಂಘಟನೆಗಳೂ ದನಿ ಎತ್ತಿಲ್ಲ. ಇಲ್ಲಿ ನೆಲೆಸಿರುವವರಲ್ಲಿ ಬಹುಪಾಲು ದಲಿತರೇ ಇದ್ದರೂ ದಲಿತ ಸಂಘಟನೆಗಳೂ ಸುಮ್ಮನಿವೆ. ಕ್ರೈಸ್ತ ಮಿಷನರಿಗಳು ಹೇರಳವಾಗಿದ್ದರೂ ಹಸಿದ ಜನತೆಗೆ ತತ್ವಜ್ಞಾನವನ್ನು ಹೇಳುತ್ತಿವೆಯೇ ಹೊರತು ಮೂರು ಲಕ್ಷ ಜನರ ಭವಿಷ್ಯದ ಬಗ್ಗೆ ಹೋರಾಡುವ ನೀತಿ ರೂಪಿಸುತ್ತಿಲ್ಲ. ಎಡಪಕ್ಷಗಳೂ ಈ ವಿಷಯದಲ್ಲಿ ನಿರಾಸಕ್ತಿ ತೋರುತ್ತಿರುವುದು ವಿಷಾದನೀಯ.

ಇದರೊಂದಿಗೆ, ಬಿಇಎಂಎಲ್ ಸಹ ವೈಭವವನ್ನು ಕಳೆದುಕೊಂಡಿರುವುದರಿಂದ ಜಿಲ್ಲೆ

ನಿರುದ್ಯೋಗಿಗಳ ತಾಣವಾಗಿದೆ. ಒಂದು ಕಾಲದಲ್ಲಿ ೨೫ ಅಕ್ಕಿ ಗಿರಣಿಗಳನ್ನು ಹೊಂದಿದ್ದ ಬಂಗಾರಪೇಟೆಯಂತಹ ಪಟ್ಟಣಗಳು ಇಂದು ಹತ್ತು ಪಟ್ಟು ಬೆಳೆದಿದ್ದರೂ ಅಕ್ಕಿ ಗಿರಣಿಗಳ ಸಂಖ್ಯೆ ೨-೩ಕ್ಕೆ ಇಳಿದಿದೆ. ಕೋಲಾರ ಮತ್ತಿತರ ತಾಲ್ಲೂಕುಗಳ ರೇಷ್ಮೆ ಕೃಷಿಯೊಂದೇ ಜಿಲ್ಲೆಯ ಜೀವಾಳವಾಗಿದ್ದು, ಚೀನಾ ರೇಷ್ಮೆಯ ಆಗಮನದಿಂದ ಸಾವಿರಾರು ರೇಷ್ಮೆ ನೂಲಿನ ಕೇಂದ್ರಗಳು, ಹಿಪ್ಪುನೇರಳೆ ಬೆಳೆಗಾರರು ಬೀದಿಪಾಲಾಗಿದ್ದಾರೆ. ಕೃಷಿಯಲ್ಲಾಗಲೀ, ಕೈಗಾರಿಕೆಯಲ್ಲಾಗಲೀ ಸರ್ಕಾರದಿಂದ ಪ್ರೋತ್ಸಾಹ ದೊರೆಯದೆ ಜಿಲ್ಲೆ ಬರಡು ಭೂಮಿಯಾಗಿದೆ. ಶ್ರೀಮಂತ ರೈತರು ಎಲ್ಲೆಂದರಲ್ಲಿ ಕೊಳವೆ ಬಾವಿಗಳನ್ನು ತೋಡಿ, ಜಿಲ್ಲೆಯ ಅಂತರ್ಜಲ ಪ್ರಮಾಣ ಕ್ಷೀಣಿಸುತ್ತಿದೆ. ಬಾಗೇಪಲ್ಲಿ ಮುಂತಾದ ತಾಲೂಕುಗಳಲ್ಲಿ ೮೦೦ ಅಡಿಗಳವರೆಗೂ ನೀರು ಸಿಗದಿರುವುದು ಸಣ್ಣ ಮತ್ತು ಅತಿ ಸಣ್ಣ ರೈತರನ್ನು ಕಂಗೆಡಿಸಿದೆ.

ಇನ್ನು ಮಂಡ್ಯ ಮತ್ತು ಸುತ್ತಮುತ್ತಲಿನ ಪ್ರದೇಶಗಳು ಇಂದಿಗೂ ಹಸಿರು ಹೊದಿಕೆಯಂತೆ ಕಂಡುಬಂದರೂ ಕಾರಿಡಾರ್ ಯೋಜನೆ, ಚತುಷ್ಪಥ ರಸ್ತೆ ಮುಂತಾದ ಯೋಜನೆಗಳಿಂದ ರೈತರು ಫಲವತ್ತಾದ ಭೂಮಿಯನ್ನು ಮಾರಿಕೊಳ್ಳುತ್ತಿದ್ದಾರೆ. ವರ್ತುಲ ರಸ್ತೆಗಳ ನಿರ್ಮಾಣ, ಅದರ ಸುತ್ತ ನಿರ್ಮಾಣವಾಗುವ ಬಡಾವಣೆಗಳು, ಇವುಗಳ ಹಿಂದಿರುವ ಭೂ ಮಾಫಿಯಾಗಳು ಸಕ್ಕರೆ ನಾಡಿನ ರೈತರನ್ನು ಕಬ್ಬಿನ ಜಲ್ಲೆಯಂತೆ ಹೀರುತ್ತಿವೆ. ನಗರದ ಐಷಾರಾಮದ ಜೀವನ ಶೈಲಿ ಒಂದು ಕಡೆ ಸೆಳೆದರೆ, ಇನ್ನೊಂದೆಡೆ ಸಕ್ಕರೆ ಕಾರ್ಖಾನೆಗಳ ಕೊರತೆ, ಬೆಳೆದ ಭತ್ತಕ್ಕೆ ಮತ್ತು ಕಬ್ಬಿಗೆ ದೊರೆಯದ ಬೆಲೆ, ತೆಂಗಿನ ಬೆಳೆಯನ್ನು ಕಾಡುವ ನುಸಿ ರೋಗ ಮುಂತಾದ ಸಮಸ್ಯೆಗಳು ರೈತರನ್ನು ಭೂಮಿಯಿಂದ ವಿಮುಖರನ್ನಾಗಿ ಮಾಡುತ್ತಿವೆ. ಜಾಗತೀಕರಣವು ಎಲ್ಲಾ ವರ್ಗದ ಜನರನ್ನೂ ಬೀದಿಪಾಲು ಮಾಡುತ್ತಿರುವುದಕ್ಕೆ ಮಂಡ್ಯ ಮತ್ತು ಕೊಡಗಿನ ಕಾಫಿ ಎಸ್ಟೇಟ್ ಮಾಲೀಕರ ಸ್ಥಿತಿಗಳೇ ಪ್ರತ್ಯಕ್ಷ ಸಾಕ್ಷಿ.

## ಸಾಮಾಜಿಕ ಸೌಹಾರ್ದತೆ

ಟಿಪ್ಪು ಕಾಲದಿಂದಲೇ ಕರ್ನಾಟಕದ ಸಾಮಾಜಿಕ ಸೌಹಾರ್ದತೆಯ ತಳಹದಿಯನ್ನು ಅರಸಬಹುದು. ಇದೇ ಪರಂಪರೆಯ ಒಡೆಯರ ಕಾಲದಲ್ಲೂ ಕಂಡುಬರುತ್ತದೆ. ಉತ್ತರ ಭಾರತಕ್ಕೆ ಹೋಲಿಸಿದರೆ ಕರ್ನಾಟಕದಲ್ಲಿ ಜಾತಿ ಮತ್ತು ಮತೀಯ ವೈಷಮ್ಯಗಳು ಸ್ಥಿಮಿತದಲ್ಲಿವೆ. ಆದರೆ ಕಳೆದ ಎರಡು ದಶಕಗಳಲ್ಲಿ ರಾಜ್ಯದ ಸಾಮಾಜಿಕ ಭಾವೈಕ್ಯಕ್ಕೆ ಹೊಡೆತ ಬೀಳುತ್ತಿರುವುದನ್ನು ನಾವು ಗಮನಿಸಬಹುದು.

ದಲಿತ ಹಿಂದುಳಿದವರ ಆರ್ಥಿಕ ಸಬಲೀಕರಣ, ಸಾಮಾಜಿಕ ಉನ್ನತಿಯಿಂದಲೇ ಜಾತಿ ಪ್ರಜ್ಞೆ ನಿರ್ನಾಮವಾಗುವುದಿಲ್ಲ. ದಲಿತ ಸಂಘಟನೆಗಳು ಎಷ್ಟೇ ಪ್ರಬಲವಾಗಿದ್ದರೂ, ಕಂಬಾಲಪಲ್ಲಿಯ ಸಾಮೂಹಿಕ ಹತ್ಯೆ, ಕಡಕೋಳದ ಬಹಿಷ್ಕಾರಗಳು ಜಾತಿ ಪ್ರಜ್ಞೆ ಜೀವಂತವಾಗಿರುವುದನ್ನು ತೋರಿಸುತ್ತವೆ. ಇಂದಿಗೂ ಅನೇಕ ಹಳ್ಳಿಗಳಲ್ಲಿ ಅಸ್ಪೃಶ್ಯತೆ ಆಚರಣೆಯಲ್ಲಿರುವುದು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಲೇ ಇದೆ. ಮೀಸಲಾತಿಯ ಮೂಲಕ ಸರ್ಕಾರೀ ನೌಕರಿ ಗಳಿಸಿರುವ ದಲಿತ ವರ್ಗವೂ ತನ್ನ ಪರಂಪರೆಯನ್ನು ಮರೆತಂತಿದೆ. ಕಡಕೋಳದ ಬಹಿಷ್ಕಾರದ ಘಟನೆಯಲ್ಲಿ ಛಲವಾದಿ ದಲಿತರನ್ನು ಬಹಿಷ್ಕರಿಸಿದವರಲ್ಲಿ ಮಾದಿಗರೂ ಸೇರಿದ್ದರು ಎಂಬ ಅಂಶ ಇಲ್ಲಿ ಮುಖ್ಯ. ಹಾಗಾಗಿಯೇ ಇಂದು ದಲಿತರಲ್ಲೇ ಎಡ/ಬಲಗಳ ವಾದ ಆರಂಭವಾಗಿದ್ದು, ರಾಜಕೀಯ ಶಕ್ತಿಗಳಿಗೆ ದಲಿತ ಸಮುದಾಯವನ್ನು ಒಡೆಯಲು ಅನುಕೂಲವಾಗಿದೆ. ಆದರೆ ಕೋಮುವಾದೀ ಫ್ಯಾಸಿಸಂನ್ನು ವಿರೋಧಿಸುವಂತೆ

ಜಾತಿವಾದದ ಫ್ಯಾಸಿಸಂನ್ನೂ ವಿರೋಧಿಸದಿರುವುದು ರಾಜ್ಯದ ಪ್ರಗತಿಪರ ಸಂಘಟನೆಗಳ ನ್ಯೂನತೆಯಾಗಿದೆ.

೯೦ರ ದಶಕದ ರಾಜ್ಯದ ರಾಜಕೀಯದಲ್ಲಿ ಪರ್ವಕಾಲ. ಕಾಂಗ್ರೆಸ್ ಪಕ್ಷದ ಏಕಪಕ್ಷೀಯ ಆಡಳಿತ ಕೊನೆಗೊಂಡು ಬಹುಪಕ್ಷೀಯ ರಾಜಕೀಯ ಆರಂಭಗೊಂಡದ್ದು ಈ ದಶಕದಲ್ಲಿಯೇ. ವಿಷಾದವೆಂದರೆ, ಅಯೋಧ್ಯೆ ಘಟನೆಗಳ ಛಾಯೆ ಕರ್ನಾಟಕದ ಮೇಲೆ ಬೀಳತೊಡಗಿದ್ದೂ ಇದೇ ದಶಕದಲ್ಲಿಯೇ. ಇದಕ್ಕೆ ಮುಂಚೆಯೂ ಇಲ್ಲಿ ಕೋಮುಗಲಭೆಗಳು ನಡೆಯುತ್ತಿದ್ದವು ಹಿಂದೂ ಮುಸ್ಲಿಂ ಗಲಭೆಗಳಿಗೆ ಕುಖ್ಯಾತವಾದ ಕೋಲಾರ, ಶಿಡ್ಲಘಟ್ಟ, ರಾಮನಗರ ಮುಂತಾದ ಪಟ್ಟಣಗಳಲ್ಲಿ ಕೋಮುಗಲಭೆಗಳು ಸಾಮಾನ್ಯವಾಗಿದ್ದರೂ ಕೆಲವೊಮ್ಮೆ ಮಂಗಳೂರು, ಸುರತ್ಕಲ್, ಭಟ್ಕಳ ಮುಂತಾದ ಪಟ್ಟಣಗಳಲ್ಲೂ ಗಲಭೆಗಳು ಉಂಟಾಗುತ್ತಿದ್ದವು. ರಥಯಾತ್ರೆಯ ಸಂದರ್ಭದಲ್ಲಿ ನಡೆದ ಗಲಭೆಗಳಲ್ಲಿ ೭೮ ದಿನಗಳ ಕರ್ಫ್ಯೂ ಎದುರಿಸಿದ ಕರಾಳ ದಾಖಲೆ ಕೋಲಾರ ನಗರಕ್ಕಿದೆ. ಆದರೆ ಇಲ್ಲಿನ ಗಲಭೆಗಳು ಮತೀಯ ಕಾರಣಗಳಿಗಿಂತಲೂ ಆರ್ಥಿಕ ಕಾರಣಗಳಿಗಾಗಿ ನಡೆಯುತ್ತಿದ್ದವು. ಕೋಲಾರ ಮತ್ತಿತರ ಪ್ರದೇಶಗಳಲ್ಲಿ ಹಿಪ್ಪುನೇರಳೆ ಬೆಳೆಯುವುದು, ರೇಷ್ಮೆ ಗೂಡು ಕೃಷಿ ಮಾಡುವುದು ಬಹುತೇಕ ಹಿಂದೂಗಳಾದರೆ, ರೇಷ್ಮೆ ಗೂಡನ್ನು ಕೊಳ್ಳುವುದು ಮತ್ತು ನೂಲು ತೆಗೆಯುವ ವೃತ್ತಿ ಮುಸಲ್ಮಾನರದಾಗಿದೆ. ಈ ಎರಡು ಬಣಗಳ ನಡುವಿನ ಮಾರುಕಟ್ಟೆ ಸಂಬಂಧಿ ವಿವಾದಗಳೇ ಅನೇಕ ವೇಳೆ ಕೋಮುಗಲಭೆಗಳಾಗಿ ಪರ್ಯವಸಾನಗೊಳ್ಳುತ್ತಿದ್ದವು.

ಆದರೆ ಅಯೋಧ್ಯೆಯ ಘಟನೆಗಳು ಮತ್ತು ಬಾಬ್ರಿ ಮಸೀದಿಯ ಧ್ವಂಸ ಇಲ್ಲಿನ ಚಿತ್ರಣವನ್ನೇ ಬದಲಾಯಿಸಿತು. ಮಾರುಕಟ್ಟೆ ಪ್ರೇರೇಪಿತ ಕೋಮುವಾದವು ಮತೀಯ ಕೋಮುವಾದವಾಗಲು ಹೆಚ್ಚು ಸಮಯ ಬೇಕಾಗಲಿಲ್ಲ. ಸಂಘ ಪರಿವಾರ ತನ್ನ ಕಬಂಧ ಬಾಹುಗಳನ್ನು ಎಲ್ಲೆಡೆ ಹರಡುತ್ತಿದ್ದಂತೆಯೇ, ಮುಸ್ಲಿಂ ಮೂಲಭೂತವಾದವೂ ತನ್ನ ನೆಲೆಯನ್ನು ಹುಡುಕತೊಡಗಿತು. ಇದರ ಪರಿಣಾಮವನ್ನೇ ನಾವಿಂದು ಮಂಗಳೂರಿನಲ್ಲಿ ಕಾಣುತ್ತಿದ್ದೇವೆ. ಅಯೋಧ್ಯಾ ಕಾಂಡದ ನಂತರದಲ್ಲಿ ಹಿಂದೆ ಕೋಮುಗಲಭೆಗಳಿಗೆ ಹೆಸರಾಗಿದ್ದ ಪ್ರದೇಶಗಳು ಕೋಮು ಸಾಮರಸ್ಯ ಸಾರುವತ್ತ ಗಮನ ಹರಿಸಲಾರಂಭಿಸಿದರೆ, ಮತೀಯ ಭಾವೈಕ್ಯತೆಗೆ ಹೆಸರಾಗಿದ್ದ ಪ್ರದೇಶಗಳು, ದ್ವೇಷದ ತಾಣಗಳಾದವು. ಬಹುಮುಖೀ ಸಂಸ್ಕೃತಿಯ ಪ್ರತೀಕವಾಗಿದ್ದ ಬಾಬಾಬುಡನ್‌ಗಿರಿ ಕೋಮು ರಾಜಕೀಯದ ತಾಣವಾಯಿತು. ಸಂಘ ಪರಿವಾರ ದತ್ತ ಪೀಠವನ್ನು ವಿಮೋಚನೆ ಮಾಡುವ ಸಂಕಲ್ಪ ತೊಟ್ಟು ಒಂದು ಸಮುದಾಯದ ಆಚರಣೆಯಾಗಿದ್ದ ದತ್ತ ಆರಾಧನಾ ಪದ್ಧತಿಯನ್ನು ಸಾರ್ವತ್ರೀಕರಣಗೊಳಿಸುವ ಯತ್ನದಲ್ಲಿ ಶೋಭಾ ಯಾತ್ರೆ, ದತ್ತ ಮಾಲೆ(ಅಯ್ಯಪ್ಪ ಮಾಲೆಯನ್ನನುಸರಿಸಿ) ಮುಂತಾದವುಗಳನ್ನು ಸೃಷ್ಟಿಸಿತು. ಹುಬ್ಬಳ್ಳಿಯ ಈದ್ಗಾ ಮೈದಾನದಲ್ಲಿ ತ್ರಿವರ್ಣ ಧ್ವಜ ಹಾರಿಸುವುದನ್ನೇ ತನ್ನ ಕೇಂದ್ರ ಬಿಂದುವನ್ನಾಗಿ ಮಾಡಬೇಕೆಂದಿದ್ದ ಸಂಘ ಪರಿವಾರಕ್ಕೆ ಅಲ್ಲಿನ ಸೋಲು, ದತ್ತ ಪೀಠದಲ್ಲಿ ಹೊಸ ತಂತ್ರಗಳನ್ನು ರೂಪಿಸಲು ಅನುಕೂಲವಾಯಿತು.

ಬಾಬಾ ಬುಡನ್‌ಗಿರಿಯನ್ನು ಅಯೋಧ್ಯೆ ಮಾಡುತ್ತೇವೆಂದು ಪಣ ತೊಟ್ಟಿರುವ ಸಂಘ ಪರಿವಾರ ಮತ್ತು ಬಿಜೆಪಿಗೆ ರಾಜ್ಯದಲ್ಲಿ ರಾಜಕೀಯವಾಗಿ ಭದ್ರ ನೆಲೆ ಕಾಣಲು ಈ ವಿವಾದ ತಳಹದಿ ಒದಗಿಸಿದೆ. ಈ ವಿವಾದವನ್ನು ಜೀವಂತವಾಗಿಡಲು ಆಗಾಗ್ಗೆ ಅಲ್ಪ ಸಂಖ್ಯಾತರನ್ನು ಕೆಣಕುವಂತಹ ವಿವಾದಗಳನ್ನು ಹುಟ್ಟುಹಾಕಲಾಗುತ್ತದೆ. ಈ ನಿಟ್ಟಿನಲ್ಲಿ ಟಿಪ್ಪು ಸುಲಭ ತುತ್ತಾಗುತ್ತಾನೆ. ಇತಿಹಾಸವನ್ನು ಅಗೆಯುತ್ತಲೇ

ಮತೀಯ ರಾಜಕೀಯದ ಛಾಪನ್ನು ಉಳಿಸಿಕೊಳ್ಳಲೆತ್ನಿಸುವ ಭಾಜಪ ಮತ್ತು ಸಂಘ ಪರಿವಾರಕ್ಕೆ, ಮಂಗಳೂರಿನಲ್ಲಿ ಬೆಸ್ತರ ಸಮುದಾಯ ಮತ್ತು ಮೀನು ಮಾರಾಟ ಮಾಡುವ ಬ್ಯಾರಿ ಮುಸ್ಲಿಂಗಳ ಘರ್ಷಣೆ ಬಯಸದೇ ಬಂದ ಭಾಗ್ಯದಂತಾಗಿದೆ.

ಮುಸ್ಲಿಂ ಮುಲಭೂತವಾದಿಗಳೂ ಇಲ್ಲಿ ನೆಲೆಯೂರಿರುವ ಅಂಶವನ್ನು ಕಡೆಗಣಿಸಲಾಗುವುದಿಲ್ಲ. ರಾಜಕೀಯ, ಸಾಮಾಜಿಕ, ಸಾಮುದಾಯಿಕ ಮತ್ತು ತಾತ್ವಿಕ ನಾಯಕತ್ವದ ಕೊರತೆ ಎದುರಿಸುತ್ತಿರುವ ಮುಸ್ಲಿಂ ಸಮುದಾಯ, ಬಹುತೇಕವಾಗಿ ಕೋಮು ಭಾವನೆಗಳಿಂದ ದೂರ ಉಳಿದಿದ್ದರೂ ಕೆಲವು ರಾಜಕೀಯ ಪ್ರೇರೇಪಿತ ಶಕ್ತಿಗಳು ಮತ್ತು ಇಸ್ಲಾಂ ಅಪಾಯದಲ್ಲಿದೆ ಎಂದು ಬೊಬ್ಬೆ ಹೊಡೆಯುವ ಮುಲ್ಲಾಗಳ ಕುತಂತ್ರದಿಂದ ಇಲ್ಲೂ ಮೂಲಭೂತವಾದ ಬೇರೂರುತ್ತಿದೆ. ಗೋಹತ್ಯೆಯನ್ನು ತಡೆಗಟ್ಟುವ ನೆಪದಲ್ಲಿ, ಮತಾಂತರವನ್ನು ನಿಲ್ಲಿಸುವ ನೆಪದಲ್ಲಿ ಸಾಂಸ್ಕೃತಿಕ ಆರಕ್ಷಕರಂತೆ ವರ್ತಿಸುತ್ತಾ, ಕಾನೂನನ್ನು ಕೈಗೆತ್ತಿಕೊಂಡು ಅಲ್ಪಸಂಖ್ಯಾತರ ಮೇಲೆ ಕ್ರೈಸ್ತ ಮಿಷನರಿಗಳ ಮೇಲೆ ದಾಳಿ ನಡೆಸುತ್ತಿರುವ ಭಜರಂಗದಳಕ್ಕೆ ಪ್ರತಿಯಾಗಿ ಮುಸ್ಲಿಂ ಯುವಕರೂ ತಯಾರಾಗುತ್ತಿರುವುದು ಹಿತಕರವಲ್ಲ. ಇದಕ್ಕೆ ಎರಡೂ ಸಮುದಾಯಗಳಲ್ಲಿ ದ್ವೇಷ ಭಾವನೆಗಳನ್ನು ಬಿತ್ತುತ್ತಿರುವ ಸಂಘಟನೆಗಳನ್ನು ದೂಷಿಸಬೇಕಾಗುತ್ತದೆ. ಈ ಸಂಘಟನೆಗಳು ಸಾಂಸ್ಥಿಕ ಸ್ವರೂಪ ಪಡೆದುಕೊಳ್ಳುತ್ತಿರುವುದು ಚಿಂತೆಗೀಡುಮಾಡುವ ವಿಷಯವಾಗಿದೆ.

## ಕರ್ನಾಟಕದ ಚಳುವಳಿಗಳು

ಕರ್ನಾಟದ ಚಳುವಳಿಗಳನ್ನು ಎರಡು ರೀತಿಯಲ್ಲಿ ವಿಶ್ಲೇಷಿಸಬಹುದು. ಒಂದು ಯಾವುದೇ ಕಾಲಘಟ್ಟದಲ್ಲಿ ತತ್‌ಕ್ಷಣದ ಸಮಸ್ಯೆಗಳಿಂದ ಹುಟ್ಟಿಕೊಂಡು ನಂತರ ನೇಪಥ್ಯಕ್ಕೆ ಸರಿದರೂ ಪ್ರಭಾವ ಉಳಿಸಿಕೊಂಡಿರುವ ಚಳುವಳಿಗಳು. ಎರಡನೆಯದಾಗಿ ಒಂದು ಸಮುದಾಯದ, ವರ್ಗದ, ಜಾತಿಯ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳಲು ಉಗಮಿಸಿ, ತನ್ನ ಹೋರಾಟದ ಕಾವನ್ನು ಇಂದಿಗೂ ಉಳಿಸಿಕೊಂಡಿರುವ ಚಳುವಳಿಗಳು. ಈ ಚಳುವಳಿಗಳ ಸಾಫಲ್ಯ ವೈಫಲ್ಯಗಳಿಗಿಂತಲೂ ಅವುಗಳಿಂದ ಉಂಟಾಗಿರುವ ಅರಿವು, ಸಾಮಾಜಿಕ ಬದಲಾವಣೆಗಳನ್ನು ನೆನೆಯುವುದು ಸೂಕ್ತ. ಕರ್ನಾಟಕ ಅಥವಾ ಅಂದಿನ ಮೈಸೂರು ಉದಯಿಸಿದ್ದೇ ಏಕೀಕರಣ ಚಳುವಳಿಯಿಂದ. ಅಖಂಡ ಕರ್ನಾಟಕದ ಸ್ಥಾಪನೆಗಾಗಿ ರಾಜ್ಯದ ಎಲ್ಲಾ ವರ್ಗದ, ಎಲ್ಲಾ ರಾಜಕೀಯ ಪಕ್ಷಗಳ ನಾಯಕರುಗಳೂ, ಸಾಹಿತಿ ಕಲಾವಿದರು ಹೋರಾಟ ನಡೆಸಿದ್ದು ಈಗ ಇತಿಹಾಸ. ಆದರೆ ಇತಿಹಾಸದ ಪುಸ್ತಕ ತೆರೆಯುವುದೇ ಕಾಗೋಡು ಚಳುವಳಿಯಿಂದ. ಏಕೀಕರಣದ ಮುನ್ನವೇ ಜರುಗಿದ್ದರೂ, ಈ ಸತ್ಯಾಗ್ರಹ ಮತ್ತು ಹೋರಾಟ ಕರ್ನಾಟಕದ ರಾಜಕೀಯದ ದಿಕ್ಕನ್ನೇ ಬದಲಾಯಿಸುವುದರಲ್ಲಿ ಮಹತ್ವದ ಪಾತ್ರ ವಹಿಸಿತ್ತಲ್ಲದೆ, ಇಂದಿಗೂ ಭೂ ಮಾಲೀಕರ ವಿರುದ್ಧದ ಹೋರಾಟಕ್ಕೆ ಇದು ರೂಪಕದಂತೆ ನಿಲ್ಲುತ್ತದೆ. ಸಾಗರ ತಾಲ್ಲೂಕಿನಲ್ಲಿ ಬಹುಸಂಖ್ಯಾತರಾಗಿದ್ದ ದೀವರ ಜನಾಂಗದವರು ಗೇಣಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದವರು. ಮಲೆನಾಡಿನ ಭೂಮಾಲೀಕರ ಮುಂದೆ ಈ ಜಾತಿಯ ಹೆಣ್ಣುಮಕ್ಕಳು ಮೊಣಕಾಲ ಕೆಳಗೆ ಸೀರೆ ಉಡುವಂತಿರಲಿಲ್ಲ, ಚಪ್ಪಲಿ ಹಾಕುವಂತಿರಲಿಲ್ಲ, ಮೇಲ್ಜಾತಿಯವರ ಎದುರು ನಡೆದು ಹೋಗುವಂತಿರಲಿಲ್ಲ. ಈ ಸಾಮಾಜಿಕ ಸಮಸ್ಯೆಗಳೊಂದಿಗೆ ಅನಕ್ಷರಸ್ಥರಾಗಿದ್ದ ದೀವರ ಜನಾಂಗದವರು ಭೂಮಾಲೀಕರ ದಬ್ಬಾಳಿಕೆ, ದೌರ್ಜನ್ಯ ಎದುರಿಸಬೇಕಾಗಿತ್ತು. ೧೯೫೨ರಲ್ಲಿ ಸಮಾಜವಾದಿ ಪಕ್ಷ ಮತ್ತು ಕಾಂಗ್ರೆಸ್ ಪಕ್ಷಗಳು ಈ ದಬ್ಬಾಳಿಕೆಯ ವಿರುದ್ಧ ಹೋರಾಟಕ್ಕೆ ನಿಂತಾಗ

ಆದೊಂದು ಜಾತಿ, ಮತ, ಪ್ರಾಂತ್ಯಗಳನ್ನು ಮೀರಿದ ಚಳುವಳಿಯಾಗಿ ಹೊರಹೊಮ್ಮಿತ್ತು. ಸಮಾಜವಾದೀ ನೇತಾರ ರಾಮಮನೋಹರ ಲೋಹಿಯಾರವರ ಭೇಟಿಯ ನಂತರದಲ್ಲಿ ತೀವ್ರತೆ ಪಡೆದುಕೊಂಡ ಚಳುವಳಿಯಲ್ಲಿ ಗಣಪತಿಯಪ್ಪ, ಗೋಪಾಲಗೌಡ, ಈಶ್ವರಪ್ಪ, ಗರುಡ ಶರ್ಮ, ಸೀತಾರಾಮ ಐಯ್ಯಂಗಾರ್, ಕಡಿದಾಳ್ ಮಂಜಪ್ಪ, ಬಸವಾನಿ ರಾಮಚಂದ್ರ ಶರ್ಮ ಮುಂತಾದ ನಾಯಕರು ಮಹತ್ವದ ಪಾತ್ರ ವಹಿಸಿದ್ದರು. ಕಾಂಗ್ರೆಸ್ ಮತ್ತು ಸಮಾಜವಾದಿ ಪಕ್ಷಗಳ ಸಿದ್ಧಾಂತಗಳು ಭಿನ್ನವಾಗಿದ್ದರೂ ತಮ್ಮ ರಾಜಕೀಯ ನಿಲುವುಗಳನ್ನು ಬದಿಗೊತ್ತಿ ರೈತ ಚಳುವಳಿಗೆ ನಾಂದಿ ಹಾಡಿದ ಕೀರ್ತಿ ಕಾಗೋಡು ಸತ್ಯಾಗ್ರಹಕ್ಕೆ ಸಲ್ಲುತ್ತದೆ.

ನಂತರ ಇಡೀ ರಾಜ್ಯದ ಗಮನ ಸೆಳೆದ ಚಳುವಳಿ ಎಂದರೆ ಗೋಕಾಕ್ ಚಳುವಳಿ. ಕನ್ನಡವನ್ನು ಆಡಳಿತ ಭಾಷೆಯಾಗಿ, ಶಿಕ್ಷಣದಲ್ಲಿ ಮಾಧ್ಯಮವಾಗಿ ಅಳವಡಿಸುವಂತೆ ಸರ್ಕಾರವನ್ನು ಒತ್ತಾಯಿಸಲು ೧೯೮೨ರಲ್ಲಿ ನಡೆದ ಈ ಹೋರಾಟ ಸಂಚಲನ ಉಂಟುಮಾಡಿತ್ತು. ಯಾವುದೇ ಒಂದು ರಾಜ್ಯದ ಜನತೆ ತಮ್ಮ ಮಾತೃಭಾಷೆಯನ್ನು ಉಳಿಸಿಕೊಳ್ಳಲು ನಡೆಸಿದ ಏಕೈಕ ಹೋರಾಟ ಇದಾಗಿರಬಹುದು. ವಿ.ಕೃ.ಗೋಕಾಕ್ ನೇತೃತ್ವದಲ್ಲಿ ನೇಮಿಸಿದ್ದ ಸಮಿತಿಯ ವರದಿ ಮತ್ತು ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲು ನಡೆದ ಈ ಚಳುವಳಿಯಲ್ಲಿ ಬಹುತೇಕ ಎಲ್ಲಾ ಸಾಹಿತಿಗಳು, ಕವಿಗಳು, ಕಲಾವಿದರು, ನಟ-ನಟಿಯರು, ವಿದ್ಯಾರ್ಥಿಗಳು ಭಾಗವಹಿಸಿದ್ದು, ನಟ ರಾಜಕುಮಾರ್ ಚಳುವಳಿಗೆ ಪ್ರವೇಶಿಸಿದ ನಂತರದಲ್ಲಿ ಚಳುವಳಿ ತೀವ್ರ ಸ್ವರೂಪ ಪಡೆಯಲಾರಂಭಿಸಿತ್ತು. ಹಲವೆಡೆಗಳಲ್ಲಿ ಇದು ಭಾಷಾ ದುರಭಿಮಾನದ ಪ್ರದರ್ಶನವಾದರೆ, ಇನ್ನು ಕೆಲವೆಡೆ ಪರಭಾಷಾ ವಿರೋಧೀ ಪ್ರವೃತ್ತಿಯನ್ನೂ ಪ್ರದರ್ಶಿಸಿದ್ದು ಕೆಲವು ಪುರೋಗಾಮೀ ಸಾಹಿತಿ ಕಲಾವಿದರನ್ನು ಈ ಚಳುವಳಿಯಿಂದ ದೂರವಿರಿಸಿತ್ತು. ವಾಟಾಳ್ ನಾಗರಾಜ್, ಜಿ. ನಾರಾಯಣ ಕುಮಾರ್, ಚಿದಾನಂದಮೂರ್ತಿ ಮುಂತಾದವರು ನೇತೃತ್ವ ವಹಿಸಿದ್ದ ಈ ಚಳುವಳಿಯ ಸಾಫಲ್ಯ, ವೈಫಲ್ಯಗಳ ಬಗ್ಗೆ ಚಿಂತಿಸುವ ಅಗತ್ಯವಿಲ್ಲದಿದ್ದರೂ, ಚಳುವಳಿಯ ನಂತರದಲ್ಲಿ ಸರ್ಕಾರಗಳು ಕನ್ನಡವನ್ನು ಆಡಳಿತ ಭಾಷೆಯಾಗಿ, ಶಿಕ್ಷಣ ಮಾಧ್ಯಮವಾಗಿ ಅನುಷ್ಠಾನಗೊಳಿಸುವಲ್ಲಿ ಕಾರ್ಯ ನಿರತವಾಗಿದ್ದು ಈ ಚಳುವಳಿಯ ಕಾಣಿಕೆ. ಆದರೆ ಚಳುವಳಿ ನಡೆದು ಮೂರು ದಶಕಗಳು ಕಳೆದಿದ್ದರೂ, ಇಂದಿಗೂ ಕನ್ನಡ ಸಂಪೂರ್ಣ ಆಡಳಿತ ಭಾಷೆಯಾಗಿಲ್ಲ, ಶಿಕ್ಷಣದಲ್ಲಿ ಮಾತೃಭಾಷಾ ನೀತಿ ಅಳವಡಿಸಲಾಗಿಲ್ಲ ಎಂದರೆ ಅದು ನಮ್ಮ ಆಳುವ ವರ್ಗದ ನಿಷ್ಕ್ರಿಯತೆಯನ್ನು ತೋರುವುದಷ್ಟೆ.

ಭಾಷಾ ಚಳುವಳಿಗಳ ಪರಂಪರೆ ಇಂದಿಗೂ ಮುಂದುವರೆದಿರುವುದಾದರೂ, ಕಳೆದ ಎರಡು ದಶಕಗಳಲ್ಲಿ ಅಂತಹ ಸಾಧನೆಯನ್ನೇನೂ ತೋರಿಲ್ಲ. ವೈಯಕ್ತಿಕ ಪ್ರತಿಷ್ಠೆ, ಹಣಬಲ ಮತ್ತು ರಾಜಕೀಯ ಪ್ರೇರೇಪಣೆಗಳಿಂದ ವಿಘಟನೆಗೊಳ್ಳುತ್ತಾ ಹೋಗುತ್ತಿರುವ ಬಹುಪಾಲು ಸಂಘಟನೆಗಳು ಕೇವಲ ರಾಜ್ಯೋತ್ಸವದ ಸಂಘಟನೆಗಳೆಂದೇ ಖ್ಯಾತಿ ಪಡೆದಿವೆ. ಕಾವೇರಿ, ಬೆಳಗಾವಿ ಮುಂತಾದ ಕೆಲವು ಭಾವುಕ ಸನ್ನಿವೇಶಗಳಿಗೆ ಸ್ಪಂದಿಸಿರುವುದನ್ನು ಬಿಟ್ಟರೆ, ಇನ್ನಾವ ರಚನಾತ್ಮಕ ಕಾರ್ಯಕ್ರಮವನ್ನೂ ಕನ್ನಡಪರ ಸಂಘಟನೆಗಳು ಹಮ್ಮಿಕೊಳ್ಳದಿರುವುದು ಚಿಂತಿಸಬೇಕಾದ ಸಂಗತಿ.

## ದಲಿತ ಚಳುವಳಿ

ದಲಿತ ಚಳುವಳಿ ಕರ್ನಾಟಕದಲ್ಲಿ ಆರಂಭಗೊಂಡದ್ದು ೭೦ರ ದಶಕದ ಆರಂಭದಲ್ಲಿ, ಆಗ ಎಲ್ಲೆಡೆ ಆರಂಭವಾದ ಉಳುವವನಿಗೇ ಭೂಮಿ ಮತ್ತು ಕೃಷಿ ಕಾರ್ಮಿಕರ ಸಮಸ್ಯೆಗಳ ಕೂಗು ದಲಿತ

ಚಳುವಳಿಗೆ ಪ್ರೇರಕವಾಗಿತ್ತು. ಎಡಪಂಥೀಯ ಪಕ್ಷಗಳು ದಲಿತರ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸದಿದ್ದದ್ದೇ ದಲಿತ ಚಳುವಳಿಗೆ ನಾಂದಿಯಾಯಿತು. ಭೂಸ್ವಾಮ್ಯದ ವಿರುದ್ಧ ಮತ್ತು ಭೂಮಾಲೀಕರ ದಬ್ಬಾಳಿಕೆಗಳ ವಿರುದ್ಧ ದನಿ ಎತ್ತಿದ ಬುದ್ಧಿಜೀವಿಗಳು, ಆಗತಾನೇ ನಗರಗಳಿಗೆ ಬಂದು ನೆಲೆಸಿದ್ದ ವಿದ್ಯಾವಂತ ದಲಿತರು, ಕರ್ನಾಟಕದ ದಲಿತ ಚಳುವಳಿಗೆ ಪ್ರಮುಖ ದನಿಯಾಗಿ ನಿಂತರು.

ಎಪ್ಪತ್ತರ ದಶಕ ಚಳುವಳಿಗಳ ದಶಕ. ದೇಶದ ರಾಜಕೀಯ ದಿಕ್ಕನ್ನೇ ಬದಲಾಯಿಸಿದ ಜೆ.ಪಿ. ಚಳುವಳಿ, ರಾಜ್ಯದಲ್ಲೂ ಛಾಪು ಮೂಡಿಸಿತ್ತು. ಮೊದಲೇ ಲೋಹಿಯಾವಾದದಿಂದ ಪ್ರಭಾವಿತರಾಗಿದ್ದ ಸಮಾಜವಾದಿ ನಾಯಕರು ಶೋಷಿತರ ದನಿಯಾಗಿ ನಿಂತರು. ಮಹಾರಾಷ್ಟ್ರದ ದಲಿತ್ ಪ್ಯಾಂಥರ್ಸ್ ಚಳುವಳಿಯಿಂದ ಪ್ರೇರೇಪಿತರಾದ ರಾಜ್ಯದ ದಲಿತ ವಿದ್ಯಾವಂತರು, ತುರ್ತು ಪರಿಸ್ಥಿತಿಯ ಅವಧಿಯಲ್ಲಿ 'ದಲಿತ ಲೇಖಕ ಕಲಾವಿದ ಯುವ ಸಂಘ' ಎಂಬ ಸಂಘಟನೆಯನ್ನು ಬಿ. ಕೃಷ್ಣಪ್ಪನವರ ನೇತೃತ್ವದಲ್ಲಿ ಸ್ಥಾಪಿಸಿದ್ದರು. ಇದೇ ಅವಧಿಯಲ್ಲಿ ಮಂತ್ರಿಗಳಾಗಿದ್ದ ಬಸವಲಿಂಗಪ್ಪನವರು ಕನ್ನಡ ಸಾಹಿತ್ಯವನ್ನು ಬೂಸಾ ಸಾಹಿತ್ಯವೆಂದು ಖಂಡಿಸಿದ ಹಿನ್ನೆಲೆಯಲ್ಲಿ ಅವರನ್ನು ಮಂತ್ರಿಮಂಡಲದಿಂದ ಉಚ್ಚಾಟಿಸಲಾಯಿತು. ಈ ಪ್ರಕರಣ ದಲಿತ ಚಳವಳಿಗೆ ತಿರುವನ್ನು ನೀಡಿತ್ತು. ಆ ವೇಳೆಗಾಗಲೇ ಶಿವಮೊಗ್ಗದಲ್ಲಿ ಕಾರ್ಯನಿರತವಾಗಿದ್ದ ಕೃಷ್ಣಪ್ಪನವರ ನೇತೃತ್ವದ ದಲಿತ ಸಂಘರ್ಷ ಸಮಿತಿ, ತಾತ್ವಿಕವಾಗಿ ಭಿನ್ನ ರೂಪ ತಳೆದು ದಲಿತ ಚಳುವಳಿಗೆ ನಾಂದಿಹಾಡಿತ್ತು.

ಹತ್ತು ಹಲವು ಸಮಸ್ಯೆಗಳನ್ನು ಎದುರಿಸಬೇಕಾದ ದಲಿತ ಚಳುವಳಿಗೆ ರಾಜಕೀಯ ಉದ್ದೇಶಗಳಿಗಿಂತಲೂ ದಲಿತರ ವಿಮೋಚನೆಯೇ ಪ್ರಮುಖ ಧ್ಯೇಯವಾಯಿತು. ಅಸ್ಪೃಶ್ಯ- ಭೂರಹಿತ ದಲಿತರು, ಇಡೀ ವ್ಯವಸ್ಥೆಯನ್ನು ಎದುರಿಸಿ ಹೋರಾಡುವುದು ಅವಶ್ಯವಾಗಿತ್ತು. ಇದೇ ಅವಧಿಯಲ್ಲಿ ರಾಜ್ಯದಲ್ಲಿ ಆರಂಭಗೊಂಡ ಬಂಡಾಯ ಸಾಹಿತ್ಯ ಅಂಬೇಡ್ಕರ್ ಸಾಹಿತ್ಯವನ್ನು ಕನ್ನಡಿಗರಿಗೆ ಪರಿಚಯಿಸುವುದರಲ್ಲಿ ಸಫಲವಾಯಿತು. ದೇವನೂರು ಮಹಾದೇವ, ಸಿದ್ಧಲಿಂಗಯ್ಯ,ಬರಗೂರು ರಾಮಚಂದ್ರಪ್ಪ ಮುಂತಾದ ಕವಿಗಳು ಜನರ ನೋವು, ಆಕ್ರೋಶಗಳಿಗೆ ಸ್ಪಂದಿಸುವಂತಹ, ಮೇಲ್ಜಾತಿಯವರ, ಭೂಮಾಲೀಕರ, ಶ್ರೀಮಂತರ ದಬ್ಬಾಳಿಕೆಯನ್ನು ಎದುರಿಸಿ ನಿಲ್ಲುವಂತಹ ಸಾಹಿತ್ಯ ರಚಿಸಿ, ವಿದ್ಯಾವಂತ ದಲಿತರಲ್ಲಿ ಹೋರಾಟದ ಪ್ರಜ್ಞೆ ಮೂಡಿಸುವುದರಲ್ಲಿ ಸಫಲವಾದರು.

ದಲಿತ ಚಳುವಳಿಯ ಪ್ರಮುಖ ಹೋರಾಟಗಳಲ್ಲಿ ಭದ್ರಾವತಿ ತಾಲ್ಲೂಕಿನ ಸಿದ್ಲಿಪುರದಲ್ಲಿ ನಡೆದ ಭೂ ಹೋರಾಟ, ಹಾಸನದ ಬಿದರೆ ಕಾವಲು ಭೂ ಆಕ್ರಮಣ ಚಳುವಳಿ, ಚಿಕ್ಕಮಗಳೂರಿನ ಚಂಡೆಗೋಡು, ಹೆಗ್ಗಡದೇವನ ಕೋಟೆಯ ದೇವಲಾಪುರ, ಕೋಲಾರದ ನಾಗಸಂದ್ರದ ಜೀತಗಾರರ ಭೂಮಿ ಹೋರಾಟ, ಮರಸನಪಲ್ಲಿ, ಕರಡಗೂರು ಹೋರಾಟಗಳನ್ನು ಗುರುತಿಸಬಹುದು. ಇವಲ್ಲದೆ ಹುಣಸಿನಕೋಟೆಯ ಶೇಷಗಿರಿಯಪ್ಪನ ಕೊಲೆ ಪ್ರಕರಣ, ಚಂದ್ರಗುತ್ತಿಯ ಬೆತ್ತಲೆಸೇವೆಯ ವಿರುದ್ಧ ಹೋರಾಟ, ಸಾರಾಯಿ ನಿಷೇಧ ಹೋರಾಟ, ಮುಂತಾದ ಹೋರಾಟಗಳು ರಾಜ್ಯದ ಊಳಿಗಮಾನ್ಯ ವ್ಯವಸ್ಥೆಯ ಬೇರುಗಳನ್ನು ಶಿಥಿಲಗೊಳಿಸುತ್ತಿರುವಂತೆಲ್ಲಾ, ದಲಿತರ ಮೇಲಿನ ಆಕ್ರಮಣಗಳು, ದಬ್ಬಾಳಿಕೆಗಳು ಹೆಚ್ಚಾಗುತ್ತಲೇ ಹೋಗಿ, ಕೆಲವೊಮ್ಮೆ ಹಿಂಸಾತ್ಮಕ ರೂಪ ಪಡೆಯಲಾರಂಭಿಸಿದವು. ಈ ಆಕ್ರಮಣಗಳು ನಡೆಯುತ್ತಲೇ ಇರುವುದನ್ನು, ಕಂಬಾಲಪಲ್ಲಿ ಹತ್ಯೆಗಳು, ಕಡಕೋಳದ ಬಹಿಷ್ಕಾರ ಮುಂತಾದ ಘಟನೆಗಳಲ್ಲಿ ಕಾಣಬಹುದು.

ವಿಷಾದವೆಂದರೆ, ಯಾವುದೇ ಒಂದು ನಿರ್ದಿಷ್ಟ ಸೈದ್ಧಾಂತಿಕ ನಿಲುವು, ರಾಜಕೀಯ ಪರ್ಯಾಯವಿಲ್ಲದೆ ಸಂಘಟಿತಗೊಂಡ ದಸಂಸ ೮೦ರ ದಶಕದ ನಂತರ, ನಾಯಕರ ಪ್ರತಿಷ್ಠೆಗಳಿಗೆ

ಬಲಿಯಾಗಿ ಛಿದ್ರಗೊಂಡಿತು. ಎಲ್ಲಾ ಸಂಘಟನೆಗಳೂ ಅಂಬೇಡ್ಕರ್‌ವಾದವನ್ನೇ ಪುಷ್ಟೀಕರಿಸಿದರೂ ಒಂದೇ ವೇದಿಕೆಯಲ್ಲಿ ನಿಂತು ಹೋರಾಡುವ ಸ್ಥೈರ್ಯವನ್ನು ದಲಿತ ಚಳುವಳಿ ಕಳೆದುಕೊಂಡಿದೆ. ಜಾಗತೀಕರಣದ ಆಕ್ರಮಣ ಹೆಚ್ಚಾಗುತ್ತಿರುವ ಸಮಯದಲ್ಲಿ, ಬಹುತೇಕ ಚಳವಳಿಗಳು ನಿಷ್ಕ್ರಿಯವಾಗುತ್ತಿರುವಂತೆ ದಲಿತ ಚಳುವಳಿಯೂ ಹಿನ್ನಡೆ ಅನುಭವಿಸುತ್ತಿದೆ. ಮೇಲಾಗಿ ಆರಂಭದ ದಿನಗಳಲ್ಲಿ ದಲಿತ ಚಳುವಳಿಗೆ ಸ್ಫೂರ್ತಿಯ ಸೆಲೆಯಾಗಿದ್ದವರಲ್ಲನೇಕರು ಇಂದು ಸರ್ಕಾರೀ ಪದವಿಗಳನ್ನು ಅಲಂಕರಿಸಿ, ಸವಲತ್ತುಗಳನ್ನು ಸವಿಯುತ್ತಿದ್ದಾರೆ. ಶ್ರೀಮಂತ ರೈತರ ಪರವಾಗಿಯೇ ಹೋರಾಡುವ ರೈತ ಸಂಘಟನೆಗಳೊಡನೆ ಕೈ ಜೋಡಿಸಿರುವ ದಲಿತ ಸಂಘಟನೆಗಳೂ ಇವೆ. ಇತ್ತೀಚೆಗೆ ಎಡ-ಬಲ ಮೀಸಲಾತಿಯ ಪ್ರಶ್ನೆ ಉದ್ಭವಿಸಿದ್ದು ಅದು ದಲಿತ ಚಳುವಳಿಯಲ್ಲಿ ಬಿರುಕು ಮೂಡಿಸಿದೆ. ಈ ನೇತ್ಯಾತ್ಮಕ ಅಂಶಗಳ ನಡುವೆಯೂ, ದಲಿತ ಚಳುವಳಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದ್ದು ಶೋಷಿತ, ದಮನಿತ ಜನತೆಗೆ ಆಶಾದೀಪವಾಗಿ ಮುನ್ನಡೆಯುತ್ತಿದೆ.

## ಎಡಪಂಥೀಯ ಚಳುವಳಿ

ರಾಷ್ಟ್ರಮಟ್ಟದಲ್ಲಿ ಕಮ್ಯುನಿಸ್ಟ್ ಚಳುವಳಿ ಪ್ರಾರಂಭವಾದ ಕಾಲಘಟ್ಟದಲ್ಲೇ ಕರ್ನಾಟಕದಲ್ಲೂ ಆರಂಭಗೊಂಡಿತೆಂದು ಹೇಳಬಹುದು. ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಎಡಪಂಥೀಯ ಚಿಂತಕರು, ರಾಷ್ಟ್ರೀಯ ವಿಮೋಚನೆಯ ಜೊತೆಗೆ, ಕಾರ್ಮಿಕ ವರ್ಗದ, ದುಡಿಯುವ ವರ್ಗದ ಪರವಾಗಿ ಹೋರಾಡುತ್ತಿದ್ದರು. ೧೯೩೦ರ ದಶಕದಲ್ಲಿ ಮಿನರ್ವ ಮಿಲ್ಸ್, ರಾಜಾ ಮಿಲ್ಸ್ ಬಿನ್ನಿ ಮಿಲ್ಸ್, ಕೋಲಾರ ಚಿನ್ನದ ಗಣಿ ಮುಂತಾದ ಉದ್ದಿಮೆಗಳಲ್ಲಿ ಆರಂಭಗೊಂಡ ಕಾರ್ಮಿಕ ಹೋರಾಟಗಳೇ ರಾಜ್ಯದ ಎಡಪಂಥೀಯ ಚಳುವಳಿಗೆ ನಾಂದಿಯಾಗಿದ್ದವು. ಭಾರತದ ಮ್ಯಾಂಚೆಸ್ಟರ್ ಎಂದೇ ಪ್ರಸಿದ್ಧವಾಗಿದ್ದ ದಾವಣಗೆರೆ, ಕೋಲಾರ, ಉತ್ತರ ಕರ್ನಾಟಕದ ಹಲವು ಜಿಲ್ಲೆಗಳು ಎಡಪಂಥೀಯ ಚಳುವಳಿಗೆ ಕೇಂದ್ರ ಸ್ಥಾನವಾಗಿದ್ದವು. ೬೦ರ ದಶಕದಲ್ಲಿ ಕಮ್ಯುನಿಸ್ಟ್ ಪಕ್ಷಗಳು ಹೋಳಾದ ನಂತರವೂ ರಾಜ್ಯದಲ್ಲಿ ಮಾರ್ಕ್ಸ್‌ವಾದೀ ಚಳುವಳಿಗಳಲ್ಲಿ ಬದಲಾವಣೆಗಳು ಉಂಟಾಗಲಿಲ್ಲ. ಬಹುತೇಕವಾಗಿ ಕಾರ್ಮಿಕ ಸಂಘಟನೆ ಮತ್ತು ರೈತ ಸಂಘಟನೆಗಳನ್ನೇ ಆಧರಿಸಿದ ರಾಜ್ಯ ಎಡಪಂಥೀಯ ಚಳುವಳಿಗೆ, ಸ್ವಾತಂತ್ರ್ಯಾನಂತರದಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಬೃಹತ್ ಸಾರ್ವಜನಿಕ ಉದ್ದಿಮೆಗಳು ಉತ್ತಮ ಅಡಿಪಾಯ ಒದಗಿಸಿದವು. ದಾವಣಗೆರೆಯಲ್ಲಿನ ಜವಳಿ ಗಿರಣಿಗಳೂ ಎಡಪಂಥೀಯ ಪಕ್ಷಗಳ ಬಲವರ್ಧನೆಗೆ ಸಹಾಯಕವಾಗಿದ್ದವು. ಕೆ.ಜಿ.ಎಫ್. ದಾವಣಗೆರೆ, ಬಾಗೇಪಲ್ಲಿ ಮುಂತಾದ ಕ್ಷೇತ್ರಗಳಲ್ಲಿ ಕಮ್ಯುನಿಸ್ಟ್ ಅಭ್ಯರ್ಥಿಗಳು ವಿಧಾನಸಭೆಗೆ ಆರಿಸಿ ಬಂದಿದ್ದರು. ೭೦ ದಶಕದಲ್ಲಿ ಆಡಳಿತ ವರ್ಗದಿಂದ ತೀವ್ರ ಶೋಷಣೆ ಎದುರಿಸುತ್ತಿದ್ದ ರಾಜ್ಯ ರಸ್ತೆ ಸಾರಿಗೆ ನೌಕರರನ್ನು ಸಂಘಟಿಸಿದ ಕೀರ್ತಿ ಭಾರತೀಯ ಕಮ್ಯುನಿಸ್ಟ್ ಪಕ್ಷಕ್ಕೆ ಸಲ್ಲುತ್ತದೆ. ಮಂಗಳೂರಿನಲ್ಲಿ ಬೀಡಿ ಕಾರ್ಮಿಕರು, ಕೋಲಾರದ ರೈತ ಕೃಷಿಕಾರ್ಮಿಕರನ್ನು ಸಂಘಟಿಸಿ ಹೋರಾಡಿದ ಕಮ್ಯುನಿಸ್ಟ್ ಸಂಘಟನೆಗಳು ಈ ನಿಟ್ಟಿನಲ್ಲಿ ಸಾಕಷ್ಟು ಸಾಧನೆಗಳನ್ನು ಮಾಡಿವೆ.

ಆದರೆ, ೯೦ರ ದಶಕದ ನಂತರದ ಶೀಘ್ರಗತಿಯ ಬೆಳವಣಿಗೆಗಳು ಎಡಪಂಥೀಯ ಚಳುವಳಿಯನ್ನು ಕೊಂಚ ಹಿಮ್ಮೆಟ್ಟಿಸಿವೆ. ಕಾರ್ಮಿಕ ಸಂಘಟನೆಗಳಲ್ಲಿ ಎಡಪಂಥೀಯ ರಾಜಕೀಯ ದೃಷ್ಟಿಕೋನ ಬೆಳೆಸದಿರುವುದೂ ಈ ಹಿನ್ನಡೆಗೆ ಕಾರಣವಿರಬಹುದು. ಇನ್ನೊಂದೆಡೆ ಖಾಸಗೀಕರಣ ಚುರುಕಾಗುತ್ತಿದ್ದಂತೆಲ್ಲಾ ಹಲವಾರು ಉದ್ದಿಮೆಗಳು ಅವಸಾನ ಹೊಂದಲಾರಂಭಿಸಿ, ಕಾರ್ಮಿಕರು

ಬೀದಿಪಾಲಾಗಿದ್ದಾರೆ. ಕಾರ್ಮಿಕ ಸಂಘಟನೆಗಳನ್ನೇ ಅವಲಂಬಿಸಿದ್ದ ಕಮ್ಯುನಿಸ್ಟ್ ಪಕ್ಷಗಳಿಗೆ ಈ ಬೆಳವಣಿಗೆಗಳಿಂದ ಹಿನ್ನಡೆ ಉಂಟಾಗಿರುವುದನ್ನು ದ್ಧಾವಣಗೆರೆ, ಕೆಜಿಎಫ್‌ಗಳಲ್ಲಿ ಕಾಣಬಹುದು.

ಸಿಪಿಐ ಮತ್ತು ಸಿಪಿಎಂ ಅನೇಕ ಸಂದರ್ಭಗಳಲ್ಲಿ ಜಂಟಿ ಹೋರಾಟಗಳನ್ನು ನಡೆಸಿ ಯಶಸ್ವಿಯಾಗಿದ್ದರೂ, ರಾಜಕೀಯವಾಗಿ ವಿಭಿನ್ನ ಮಾರ್ಗ ಅನುಸರಿಸುತ್ತಿರುವುದು ಮತ್ತು ಬೂರ್ಜ್ವಾ ಪಕ್ಷಗಳ ಬಾಲಂಗೋಚಿಗಳಾಗಿರುವುದು ರಾಜ್ಯದ ಕಮ್ಯುನಿಸ್ಟ್ ಚಳುವಳಿಯ ಹಿನ್ನಡೆಗೆ ಮತ್ತೊಂದು ಕಾರಣ. ಬಹುತೇಕ ಕಾರ್ಮಿಕ ಸಂಘಟನೆಗಳು ಕೆಂಬಾವುಟದಡಿ ತಮ್ಮ ಸವಲತ್ತುಗಳಿಗೆ ಹೋರಾಟ ನಡೆಸಿದರೂ ರಾಜಕೀಯ ಪ್ರಶ್ನೆ ಎದುರಾದಾಗ ಇತರ ಪಕ್ಷಗಳಿಗೆ ಮತ ನೀಡುತ್ತಿದ್ದಾಗ್ಗೆ ವಿಮಾ ಮತ್ತು ಬ್ಯಾಂಕ್ ನೌಕರರು ಕೇವಲ ತಮ್ಮ ಆರ್ಥಿಕ ಬೇಡಿಕೆಗಳಿಗಾಗಿ ಎಡ ಪಕ್ಷಗಳನ್ನು ಅವಲಂಬಿಸುತ್ತಾರೆಯೇ ಹೊರತು, ಎಡ ಪಂಥೀಯ ದೃಷ್ಟಿಕೋನವನ್ನು ತಾತ್ವಿಕವಾಗಿ ಅಳವಡಿಸಿಕೊಳ್ಳುವುದಾಗಲೀ, ಪಾಲಿಸುವುದಾಗಲೀ ಮಾಡುವುದಿಲ್ಲ. ಈ ಪ್ರಕ್ರಿಯೆಯಲ್ಲಿ ರಾಜ್ಯದ ಕಾರ್ಮಿಕ ವರ್ಗ ತನ್ನ ವರ್ಗ ಹಿತಾಸಕ್ತಿಗಳನ್ನು ದಮನಗೊಳಿಸುತ್ತಿರುವ ಶಕ್ತಿಗಳನ್ನೇ ರಾಜಕೀಯವಾಗಿ ಬೆಂಬಲಿಸುತ್ತಿದ್ದರೆ, ಅದಕ್ಕೆ ಎಡಪಕ್ಷಗಳೂ ತಾತ್ವಿಕ ಹೊಣೆಗಾರಿಕೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಇದಕ್ಕೆ ಪ್ರತಿರೋಧವಾಗಿ ಸಶಸ್ತ್ರ ಹೋರಾಟದಿಂದಲೇ ಅಧಿಕಾರ ಹಿಡಿಯುವ, ಮಾವೋವಾದಿಗಳೂ ರಾಜ್ಯದಲ್ಲಿ ಸಬಲರಾಗುತ್ತಿದ್ದಾರೆ. ಸಾಕೇತ್ ರಾಜನ್ ಹತ್ಯೆಯ ನಂತರದಲ್ಲಿ ನೇಪಥ್ಯಕ್ಕೆ ಸರಿದಿರುವ ಮಾವೋವಾದಿಗಳು ಎಡ ಪಂಥೀಯ ಚಳುವಳಿಯನ್ನು ಪ್ರಜಾತಾಂತ್ರಿಕ ಮಾರ್ಗದಿಂದ ದೂರ ಸೆಳೆದೊಯ್ಯುತ್ತಿರುವುದು ವಿಷಾದನೀಯ. ಜಾಗತೀಕರಣದ ನೀತಿಗಳಿಂದ ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿರುವ ರಾಜ್ಯದ ದುಡಿಯುವ ವರ್ಗಗಳಿಗೆ, ಕೃಷಿ ಕಾರ್ಮಿಕರಿಗೆ, ಅಸಂಘಟಿತ ಕಾರ್ಮಿಕರಿಗೆ, ಒಂದು ಪರ್ಯಾಯ ಆರ್ಥಿಕ ನೀತಿಯನ್ನು, ಸಾಮಾಜಿಕ ನ್ಯಾಯವನ್ನು, ರಾಜಕೀಯ ವೇದಿಕೆಯನ್ನು ನೀಡುವ ಜವಾಬ್ದಾರಿ ಎಡ ಪಕ್ಷಗಳ ಮೇಲಿದೆ. ಸಂಸದೀಯ ಎಡ ಪಕ್ಷಗಳ ನ್ಯೂನತೆಗಳು, ಸಶಸ್ತ್ರ ಹೋರಾಟ ಪ್ರತಿಪಾದಿಸುವ ಮಾವೋವಾದಿಗಳಿಗೆ ರಾಜ್ಯದಲ್ಲಿ ಬೇರೂರಲು ಅವಕಾಶ ಒದಗಿಸುತ್ತಿದೆ.

## ರೈತ ಚಳುವಳಿ

ಎಪ್ಪತ್ತರ ದಶಕದಲ್ಲಿ ಹುಟ್ಟಿದ ಚಳುವಳಿಗಳಲ್ಲಿ ರೈತ ಚಳುವಳಿಯೂ ಒಂದು. ೧೯೫೦-೫೧ರಲ್ಲಿ ನಡೆದ ಕಾಗೋಡು ಸತ್ಯಾಗ್ರಹ ಇಂದಿನವರೆಗೂ ರೈತ ಚಳುವಳಿಗೆ ಒಂದು ಸ್ಫೂರ್ತಿಯ ಸೆಲೆಯಾಗಿ ನಿಂತಿದೆ. ಏಕೀಕರಣದ ನಂತರದಲ್ಲಿ ಶಿವಮೊಗ್ಗ, ಕೋಲಾರ, ಹಾಸನ, ಮಂಡ್ಯ, ಮೈಸೂರು ಮುಂತಾದ ಕೃಷಿ ಆಧಾರಿತ ಪ್ರದೇಶಗಳಲ್ಲಿ ರೈತ ಚಳುವಳಿಗಳು ನಡೆಯುತ್ತಲೇ ಇದ್ದವು. ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಕಿಸಾನ್ ಯೂನಿಯನ್‌ಗಳು ಎಲ್ಲೆಡೆ ತಮ್ಮ ಪ್ರಭಾವ ಬೀರಿದ್ದವು. ರೈತರಿಗೆ ದೊರೆಯಬೇಕಾದ ಕೂಲಿ, ಬೆಂಬಲ ಬೆಲೆ ಮತ್ತಿತರ ಸವಲತ್ತುಗಳೇ ಮುಖ್ಯ ಅಂಶಗಳಾಗಿರುತ್ತಿದ್ದ ಈ ಹೋರಾಟಗಳಲ್ಲಿ, ಉಳುವವನಿಗೇ ಭೂಮಿ ನೀಡಬೇಕೆಂಬ ಬೇಡಿಕೆ ಪ್ರಾಮುಖ್ಯ ಪಡೆದುಕೊಂಡಿತ್ತು. ಕೇಂದ್ರ ಸರ್ಕಾರ ಭೂ ಸುಧಾರಣೆಗಳನ್ನು ಜಾರಿಗೊಳಿಸುವುದು ಮುಖ್ಯ ಆಗ್ರಹವಾಗಿತ್ತು. ಈ ನಡುವೆ ಭೂದಾನ ಚಳುವಳಿ ರಾಜ್ಯದಲ್ಲಿ ಹೆಚ್ಚು ಪ್ರಭಾವ ಬೀರದಿದ್ದುದರಿಂದ, ರೈತ ಹೋರಾಟಗಳು ನಿರಂತರವಾಗಿ ನಡೆಯುತ್ತಿದ್ದವು. ಈ ಹಿನ್ನೆಲೆಯಲ್ಲಿ ದೇವರಾಜ ಅರಸುರವರ

ಆಡಳಿತಾವಧಿಯಲ್ಲಿ ಅನುಷ್ಠಾನಗೊಳಿಸಿದ ಭೂ ಸುಧಾರಣೆಗಳ ಪರಿಣಾಮವಾಗಿ ರಾಜ್ಯದಲ್ಲಿ ಭೂಮಾಲೀಕರ ವಿರುದ್ಧ ಹೋರಾಟಕ್ಕೆ ವೇದಿಕೆ ಸಜ್ಜಾಯಿತು. ದಲಿತ, ಬಂಡಾಯ ಚಳುವಳಿಗಳು, ಅವುಗಳಿಂದ ಹೊರಬಂದಂತಹ ಮಣ್ಣಿನ ಮಕ್ಕಳ ನೋವು, ದುಗುಡ-ದುಮ್ಮಾನಗಳನ್ನು ಹೊರಗೆಡಹುವ ಸಾಹಿತ್ಯ, ಇವೆಲ್ಲವೂ ರೈತ ಚೈತನ್ಯವನ್ನು ಬಡಿದೆಬ್ಬಿಸಿದವು. ಕೇವಲ ಕೂಲಿಗಾಗಿ ಉತ್ತಮ ಬೆಲೆಗಾಗಿ ಹೋರಾಡುತ್ತಿದ್ದ ರೈತರು, ಭೂಮಿಗಾಗಿ, ಜೀತ ಪದ್ಧತಿಯ ವಿರುದ್ಧ ಭೂಮಾಲೀಕರ ದೌರ್ಜನ್ಯದ ವಿರುದ್ಧ ಮತ್ತು ನೀರಿಗಾಗಿ ಹೋರಾಡಲಾರಂಭಿಸಿದರು.

ಈ ಸಮಯದಲ್ಲಿ ಉತ್ತರ ಕರ್ನಾಟಕದ ನರಗುಂದ ಮತ್ತು ನವಲಗುಂದಗಳಲ್ಲಿ ಆದ ರೈತರ ಬಂಡಾಯ ಸಂಚಲನ ಉಂಟುಮಾಡಿತ್ತು. ಮಲಪ್ರಭಾ, ಘಟಪ್ರಭಾ ತೀರದ ರೈತರು ಉತ್ತಮ ಕೂಲಿಗಾಗಿ, ತಮ್ಮ ಬೆಳೆಗಳಿಗೆ ಉತ್ತಮ ಬೆಲೆ ನೀಡುವಂತೆ ಆಗ್ರಹಿಸಿ ನಡೆಸಿದ ಹೋರಾಟ ಉಗ್ರ ಸ್ವರೂಪ ಪಡೆದಿತ್ತು. ಬೆಳಗಾವಿ, ನಿಪ್ಪಾಣಿ, ಖಾನಾಪುರ, ಬೀದರ ತಾಲೂಕುಗಳಲ್ಲಿ ಎಂಟು ನೂರಕ್ಕೂ ಹೆಚ್ಚು ಗ್ರಾಮಗಳಿಗೆ ಹಬ್ಬಿದ ಈ ಚಳುವಳಿಯಲ್ಲಿ ೧೫ ರೈತರು ಪೊಲೀಸರ ಗುಂಡಿಗೆ ಬಲಿಯಾದದ್ದು ಭವಿಷ್ಯದ ರೈತ ಸಂಘಟನೆಗಳಿಗೆ ನಾಂದಿಯಾಯಿತು. ಆನಂತರ ರಾಜ್ಯದಲ್ಲಿ ರೈತ ಸಂಘರ್ಷ ಸಮಿತಿ ಅಸ್ತಿತ್ವಕ್ಕೆ ಬಂತು.

೮೦ರ ದಶಕದಲ್ಲಿ ಅಭೂತಪೂರ್ವ ಬೆಂಬಲದೊಂದಿಗೆ ಪ್ರಾರಂಭಗೊಂಡ ರೈತ ಸಂಘರ್ಷ ಸಮಿತಿ, ಅನೇಕ ಹೋರಾಟಗಳಲ್ಲಿ ಪಾಲ್ಗೊಂಡು ರೈತರಿಗೆ ನ್ಯಾಯ ಒದಗಿಸುವಲ್ಲಿ ಸಫಲವಾದರೂ, ಇಲ್ಲಿಯೂ ಸಂಘಟನಾ ವೈಫಲ್ಯ, ಸೈದ್ಧಾಂತಿಕ ನಿಲುವುಗಳ ಕೊರತೆ, ನಾಯಕರ ಸ್ವಪ್ರತಿಷ್ಠೆಗಳು ಸಂಘಟನೆಯನ್ನು ಹಿಮ್ಮೆಟ್ಟುವಂತೆ ಮಾಡಿದವು. ನಂಜುಂಡಸ್ವಾಮಿ ನೇತೃತ್ವದ ಸಂಘಟನೆಯಿಂದ ಹೊರಬಂದ ಪುಟ್ಟಣ್ಣಯ್ಯನವರ ಗುಂಪು ಪ್ರತ್ಯೇಕ ರೈತ ಸಂಘರ್ಷ ಸಮಿತಿ ರಚಿಸಿದರೂ ರೈತ ಚಳುವಳಿ ಇಬ್ಭಾಗವಾಗಿದ್ದು, ಚಳವಳಿಯ ಸ್ಥೈರ್ಯವನ್ನು ಕುಂದಿಸಿತ್ತು. ಬಹುಪಾಲು ಶ್ರೀಮಂತ, ಮಧ್ಯಮ ವರ್ಗದ ರೈತರ ಹಿತಾಸಕ್ತಿಗಳನ್ನೇ ಪ್ರತಿನಿಧಿಸುವ ಈ ರೈತ ಸಂಘಗಳು, ಕೃಷಿ ಕಾರ್ಮಿಕರ ಬವಣೆಯ ಬಗ್ಗೆ ಹೆಚ್ಚು ಗಮನ ಹರಿಸದಿರುವುದೂ ಗಮನಿಸಬೇಕಾದ ಅಂಶ. ಜಾಗತೀಕರಣದ ನಂತರ ಪ್ರಾರಂಭಗೊಂಡ ಕೃಷಿ ಬಿಕ್ಕಟ್ಟಿಗೆ ಪರಿಹಾರ ಪರ್ಯಾಯವನ್ನಾಗಲೀ ಪ್ರತಿಪಾದಿಸುವಲ್ಲಿ ರೈತ ಸಂಘಗಳು ವಿಫಲರಾಗಿವೆ. ಈ ನಿಟ್ಟಿನಲ್ಲಿ ಪುಟ್ಟಣ್ಣಯ್ಯನವರ ರೈತ ಸಂಘರ್ಷ ಸಮಿತಿ ಮತ್ತು ದಲಿತ ಸಂಘರ್ಷ ಸಮಿತಿಯ ಒಂದು ಗುಂಪು ಸೇರಿ, ಪರ್ಯಾಯ ರಾಜಕಾರಣ ಮಾಡುವ ಯತ್ನದಲ್ಲಿ ಉಗಮಿಸಿದ ಸರ್ವೋದಯ ಕರ್ನಾಟಕ ತನ್ನ ವೈರುಧ್ಯಗಳಿಂದ ಮೊಳಕೆಯಲ್ಲೇ ಅವಸಾನ ಹೊಂದಿದಂತೆ ಕಾಣುತ್ತಿದೆ.

ಈ ಚಳುವಳಿಗಳ ಸಾಲಿನಲ್ಲೇ ವಿಶ್ಲೇಷಿಸಬಹುದಾದ ಇತರ ಹೋರಾಟಗಳೆಂದರೆ, ಮಹಿಳಾ ಚಳುವಳಿ. ಪರಿಸರ ಚಳುವಳಿಗಳು, ೭೦ರ ದಶಕದಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ನಡೆದ ಮಹಿಳಾ ಮತ್ತು ಪರಿಸರ ಚಳುವಳಿಗಳು ಭಾರತದಲ್ಲೂ ತಮ್ಮ ಪ್ರಭಾವ ಬೀರಿದ್ದವು. ಮಹಿಳಾ ಚಳುವಳಿಗಳಲ್ಲಿ ವಿಮೋಚನ, ಏಐಎಂಎಸ್‌ಎಸ್ ಮುಂತಾದ ಸಂಘಟನೆಗಳು ಮಹಿಳೆಯರ ವಿಮೋಚನೆಗಾಗಿ, ವರದಕ್ಷಿಣೆ ಪಿಡುಗಿನ ವಿರುದ್ಧ, ಮಹಿಳೆಯರ ಮೇಲೆ ನಡೆಯುತ್ತಿದ್ದ ಕೌಟುಂಬಿಕ ದೌರ್ಜನ್ಯದ ವಿರುದ್ಧ ಅನೇಕ ಹೋರಾಟಗಳನ್ನು ನಡೆಸಿವೆ. ಇಂದಿಗೂ ಈ ಸಂಘಟನೆಗಳು ಸಕ್ರಿಯವಾಗಿದ್ದು ಮಹಿಳೆಯರಿಗೆ ಬೆಂಬಲವಾಗಿ ನಿಂತಿವೆ. ಪರಿಸರ ಚಳುವಳಿಯಲ್ಲೂ 'ಅಪ್ಪಿಕೋ ಚಳುವಳಿ', ಕೈಗಾ ಅಣುಸ್ಥಾವರದ

ವಿರುದ್ಧ ನಡೆದ ಹೋರಾಟಗಳು ಸ್ಮರಣೀಯವಾಗಿವೆ. ಆದಾಗ್ಯೂ ಚಳುವಳಿಗಳು ಪ್ರಖರತೆ ಕಳೆದುಕೊಳ್ಳುತ್ತಿರುವುದು ಸುವರ್ಣ ಕರ್ನಾಟಕದ ಸಂದರ್ಭದಲ್ಲಿ ಚಿಂತೆಗೀಡುಮಾಡುವ ವಿಷಯವಾಗಿದೆ.

## ಸಾಹಿತ್ಯ- ಸಿನಿಮಾ ಮತ್ತು ಕಲಾ ಪ್ರಕಾರಗಳು

ರನ್ನ, ಜನ್ನ, ಪಂಪ, ಕುಮಾರವ್ಯಾಸ, ಹರಿಹರ, ರಾಘವಾಂಕ ಈ ಹೆಸರುಗಳನ್ನು ಕೇಳಿದರೇನೇ ರೋಮಾಂಚನವಾಗುವಂತಹ ಸಾಹಿತ್ಯ ರತ್ನಗಳನ್ನು ವಿಶ್ವಕ್ಕೆ ನೀಡಿದ ಕೀರ್ತಿ ಕರ್ನಾಟಕಕ್ಕೆ ಸಲ್ಲುತ್ತದೆ. ಏಳು ಜ್ಞಾನಪೀಠ ಪ್ರಶಸ್ತಿಗಳನ್ನು ಗಳಿಸಿರುವ ಕನ್ನಡ ಸಾಹಿತ್ಯ ಇಂದು ಜಾಗತಿಕ ಮಟ್ಟದಲ್ಲಿ ತನ್ನ ಪ್ರಭಾವ ಬೀರಿದೆ. ನವೋದಯ, ನವ್ಯ, ದಲಿತ ಬಂಡಾಯ, ಆಧುನಿಕ ಸಾಹಿತ್ಯದಲ್ಲಿ ಕನ್ನಡ ಸಾಹಿತ್ಯ ಛಾಪು ಮೂಡಿಸಿದೆ. ಗೋವಿಂದ ಪೈ, ಬಿ.ಎಂ.ಶ್ರೀ.ರವರಿಂದ ಹಿಡಿದು ಕುವೆಂಪು, ಬೇಂದ್ರೆ, ಅಡಿಗ, ಕಾರಂತ, ಪು.ತಿ.ನ.ರವರನ್ನೊಳಗೊಂಡು, ಭೈರಪ್ಪ, ಅನಂತಮೂರ್ತಿ, ಕಾರ್ನಾಡ್, ಅನಕೃ, ತ್ರಿವೇಣಿ, ನಿರಂಜನರ ಹಾದಿ ಕ್ರಮಿಸಿ, ದೇವನೂರು, ಸಿದ್ಧಲಿಂಗಯ್ಯ, ಬರಗೂರು ಮುಂತಾದ ಬಂಡಾಯ ಸಾಹಿತ್ಯದವರೆಗೂ ಕನ್ನಡ ಸಾಹಿತ್ಯ ಲೋಕ ವಿಸ್ತರಿಸಿದೆ.

೫೦ರ ದಶಕದ ಮುನ್ನ ಸಾಂಪ್ರದಾಯಿಕವಾಗಿದ್ದ ಸಾಹಿತ್ಯದಲ್ಲಿ ಮೊದಲ ಬಾರಿಗೆ ಸಾಮಾಜಿಕ ಸಮಾನತೆಯ ಪರವಾಗಿ, ಪುರೋಹಿತಶಾಹಿಯ ವಿರುದ್ಧ ದನಿ ಎತ್ತಿದವರು ಕುವೆಂಪು. ನವೋದಯ ಸಾಹಿತ್ಯದ ಹರಿಕಾರರಾಗಿದ್ದ ಬೇಂದ್ರೆ, ಮಾಸ್ತಿ, ಪು.ತಿ.ನ. ಮುಂತಾದವರು ಸಂಪ್ರದಾಯ ವಾದಿಗಳಾಗಿದ್ದರೂ ಶಾಸ್ತ್ರಾಂಧರಾಗಿರಲಿಲ್ಲ. ಆದರೆ ಉದಾರವಾದ ಮತ್ತು ಮಾನತಾವಾದವನ್ನು ಪ್ರತಿಪಾದಿಸುತ್ತಿದ್ದರು ಅ.ನ.ಕೃ., ಶಿವರಾಮಕಾರಂತ, ನಿರಂಜನ, ಬಸವರಾಜ ಕಟ್ಟೀಮನಿ ಮುಂತಾದವರು ಈ ಪ್ರವೃತ್ತಿಗೆ ಸ್ಪಂದಿಸಿದರು.

ಸ್ವಾತಂತ್ರ್ಯಾನಂತರದಲ್ಲಿ ಭಾರತೀಯ ಸಮಾಜದಲ್ಲಿ ಉಂಟಾದ ಹಲವಾರು ಸಾಮಾಜಿಕ, ಆರ್ಥಿಕ ಬದಲಾವಣೆಗೆ ಪೂರಕವಾದ ಸಾಹಿತ್ಯದ ಅಗತ್ಯ ಕಂಡುಬಂದ ಸಂದರ್ಭದಲ್ಲಿ ಉಗಮವಾದ ನವ್ಯ ಪ್ರಕಾರವು, ಕನ್ನಡ ಸಾಹಿತ್ಯದ ಅನೇಕ ಕೊರತೆಗಳನ್ನು ನೀಗಿಸುವುದರಲ್ಲಿ ಸಫಲವಾಯಿತು. ಗಾಂಧಿ, ಎಂ.ಎನ್. ರಾಯ್, ಲೋಹಿಯಾರವರ ಉದಾರವಾದೀ ಮಾನವೀಯ ಸಿದ್ಧಾಂತಗಳಿಂದ ಪ್ರಭಾವಿತರಾದ ನವ್ಯ ಸಾಹಿತ್ಯದಲ್ಲಿ ಗೋಪಾಲ ಕೃಷ್ಣ ಅಡಿಗರು ಅಗ್ರಸ್ಥಾನದಲ್ಲಿ ನಿಲ್ಲುತ್ತಾರೆ. ಈ ಅವಧಿ ಯಲ್ಲಿ ಕಂಬಾರ, ಅನಂತಮೂರ್ತಿ, ಲಂಕೇಶ್, ತೇಜಸ್ವಿ, ಚಿತ್ತಾಲ ಮುಂತಾದವರು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಆಧುನಿಕತೆಗೆ ಪೂರ್ತಿಯಾಗಿ ಸ್ಪಂದಿಸದ ಜಿ.ಎಸ್. ಶಿವರುದ್ರಪ್ಪ ಚನ್ನವೀರ ಕಣವಿ, ಚದುರಂಗ, ಎಸ್.ಎಲ್. ಭೈರಪ್ಪ ಮುಂತಾದವರು ತಮ್ಮದೇ ಆದ ಶೈಲಿಯಲ್ಲಿ ಉತ್ತಮ ಸಾಹಿತ್ಯವನ್ನು ಕನ್ನಡ ಜನತೆಗೆ ಉಣಬಡಿಸಿದ್ದಾರೆ. ನವ್ಯ ಸಾಹಿತ್ಯ ಪರಂಪರೆಯಲ್ಲೇ ಕಂಡುಬಂದ ಪ್ರಮುಖ ಬೆಳವಣಿಗೆ ಎಂದರೆ ಕನ್ನಡ ನಾಟಕಗಳ ಹೊಸ ಆವಿಷ್ಕಾರಗಳು ಮತ್ತು ಪ್ರಯೋಗಗಳು... ಕಂಬಾರ, ಗಿರೀಶ್ ಕಾರ್ನಾಡ್, ಲಂಕೇಶ್, ಎಚ್.ಎಸ್. ಶಿವಪ್ರಕಾಶ್, ಪ್ರಸನ್ನ ಮುಂತಾದವರು ಕನ್ನಡ ನಾಟಕಗಳಿಗೆ ಒಂದು ಹೊಸ ಆಯಾಮ ನೀಡಿದ್ದನ್ನು ಸ್ಮರಿಸಬಹುದು.

ದಲಿತ ಚಳುವಳಿಯೊಂದಿಗೇ ಬಂದ ಬಂಡಾಯ ಸಾಹಿತ್ಯ ಕನ್ನಡ ಸಾಹಿತ್ಯ ಲೋಕದ ದಿಸೆಯನ್ನೇ ಬದಲಾಯಿಸಿತು. ಸಾಮಾನ್ಯ ಜನರಿಗೆ ತಲುಪುವಂತಹ ಸಾಹಿತ್ಯವನ್ನು ನೀಡಿದ ಈ ಅವಧಿಯಲ್ಲಿ,

ದೇವನೂರು, ಸಿದ್ಧಲಿಂಗಯ್ಯ, ಬರಗೂರು, ಮುಂತಾದವರು ಸಾಮಾನ್ಯ ಜನತೆಯ ಬದುಕಿನ ಮಗ್ಗುಲುಗಳನ್ನೇ ತಮ್ಮ ಸಾಹಿತ್ಯದ ವಸ್ತುವನ್ನಾಗಿ ಮಾಡಿಕೊಂಡು ಸಂಚಲನ ಉಂಟುಮಾಡಿದ್ದರು. ಇದೇ ಅವಧಿಯಲ್ಲಿ ಶಿವಪ್ರಕಾಶ್, ಕೆ.ಬಿ.ಸಿದ್ದಯ್ಯ ಮುಂತಾದವರು ಜನಪದ ಸಾಹಿತ್ಯವನ್ನು ಜನಪ್ರಿಯಗೊಳಿಸಲು ಸಾಕಷ್ಟು ಶ್ರಮಿಸಿ ಸಫಲರಾಗಿದ್ದರು. ತ್ರಿವೇಣಿ, ಎಂ.ಕೆ. ಇಂದಿರಾರವರ ಮಧ್ಯಮ ವರ್ಗವನ್ನಾಧರಿಸಿದ ಸಾಹಿತ್ಯದಿಂದ ಹೊರಬಂದು ವೀಣಾ ಶಾಂತೇಶ್ವರ್, ವಿಜಯಾ ದಬ್ಬೆ, ಗೀತಾ ನಾಗಭೂಷಣ್, ಸಾರಾ ಅಬೂಬಕ್ಕರ್ ಮುಂತಾದ ಲೇಖಕಿಯರು ತಮ್ಮದೇ ಆದ ಕಾಣಿಕೆ ನೀಡಿದ್ದಾರೆ. ರಂಗಭೂಮಿಯಲ್ಲಿ ನೀನಾಸಂ ಸ್ಥಾಪಿಸಿದ ಕೆ.ವಿ. ಸುಬ್ಬಣ್ಣ, ಜಾನಪದ ಲೋಕದಲ್ಲಿ ಮಹತ್ತರ ಸಂಶೋಧನೆ ನಡೆಸಿ, ಜನಪದವನ್ನು ಮನೆ ಮನೆಗೆ ತಲುಪಿಸಿದ ಕರೀಂಖಾನ್, ಎಚ್.ಎಲ್.ನಾಗೇಗೌಡ ಮುಂತಾದವರನ್ನು ನೆನೆಯುವುದು ಸೂಕ್ತ.

ಕನ್ನಡ ಚಿತ್ರರಂಗದ ಬಗ್ಗೆ ಹೇಳುವುದಾದರೆ, ೧೯೩೦ರ ಮೂಕೀ ಚಿತ್ರದಿಂದ ಪ್ರಾರಂಭಗೊಂಡ ಚಿತ್ರರಂಗ ಏಕೀಕರಣದ ನಂತರವೇ ತನ್ನದೇ ಆದ ಅಸ್ತಿತ್ವವನ್ನು ಕಂಡುಕೊಂಡಿತು. ಪ್ರಾರಂಭಿಕ ಹಂತದಲ್ಲಿ ಮಲೆಯಾಳಿ ಮತ್ತು ತಮಿಳು ಚಿತ್ರಗಳ ರೀಮೇಕ್ ಚಿತ್ರಗಳನ್ನೇ ನೀಡುತ್ತಿದ್ದ ಕನ್ನಡ ಚಿತ್ರರಂಗದಲ್ಲಿ ಯಾವುದೇ ದೇಶೀಯ ಸಾಮಾಜಿಕ ಪರಿವೆ ಕಂಡುಬರುತ್ತಿರಲಿಲ್ಲ. ಆದರೆ ಏಕೀಕರಣದ ನಂತರ ಬಿಡುಗಡೆಯಾದ 'ಕಿತ್ತೂರು ಚೆನ್ನಮ್ಮ' ಮತ್ತು 'ರಣಧೀರ ಕಂಠೀರವ' ಚಿತ್ರಗಳು ಕನ್ನಡಿಗರ ಸ್ವಂತಿಕೆ, ಅನನ್ಯತೆಯನ್ನು ಪ್ರತಿಬಿಂಬಿಸುವಲ್ಲಿ ಸಫಲವಾಗಿದ್ದವು. ೬೦-೭೦ರ ದಶಕದಲ್ಲಿ ಬಿಡುಗಡೆಯಾದ ಕಲಾತ್ಮಕ, ಸಾಮಾಜಿಕ ಕಳಕಳಿಯುಳ್ಳ ಮಣ್ಣಿನ ಮಗ, ನಾಂದಿ, ನಂದಾದೀಪ, ಉಯ್ಯಾಲೆ, ಗೆಜ್ಜೆಪೂಜೆ, ಶರಪಂಜರ, ಸಂಸ್ಕಾರ, ಘಟಶ್ರಾದ್ಧ, ವಂಶವೃಕ್ಷ, ಚೋಮನ ದುಡಿ, ಹಂಸಗೀತೆ... ಮುಂತಾದ ಚಿತ್ರಗಳ ಪರಂಪರೆ ೯೦ರ ದಶಕದ ವೇಳೆಗೇ ಕಣ್ಮರೆಯಾಗತೊಡಗಿತು. ರಾಜಕುಮಾರ್ ಚಿತ್ರಗಳೂ ನಾಯಕನಟನ ಆರಾಧನೆಯ ಸುತ್ತಲೇ ಗಿರಕಿ ಹೊಡೆಯಲಾರಂಭಿಸಿದವು. ಸಂಗೀತ ಪ್ರಧಾನ ಚಿತ್ರಗೀತೆಗಳಿಗೆ ತಿಲಾಂಜಲಿ ನೀಡಲಾಯಿತು.

ಒಂದ ಕಾಲದಲ್ಲಿ ಉತ್ತಮ ಗುಣಮಟ್ಟದ ಚಿತ್ರಗಳಿಗೆ ಹೆಸರಾಗಿದ್ದ ಕನ್ನಡ ಚಿತ್ರರಂಗ, ೮೦ರ ದಶಕದ ನಂತರದಲ್ಲಿ ವರ್ಚಸ್ಸನ್ನು ಕಳೆದುಕೊಳ್ಳಲಾರಂಭಿಸಿತು. ರಾಜಕುಮಾರ್‌ರವರ ಚಿತ್ರಗಳೂ ಅವರ ವೈಯಕ್ತಿಕ ವರ್ಚಸ್ಸನ್ನು ಬೆಳೆಸಲೆಂದೇ ರಾಜ್‌ರವರ ಸ್ವಂತ ನಿರ್ಮಾಣ ಸಂಸ್ಥೆ ಆರಂಭಗೊಂಡ ಮೇಲೆ ಅವರ ಸಂಸ್ಥೆಯಿಂದ ಯಾವುದೇ ಕಲಾತ್ಮಕ, ರಾಷ್ಟ್ರೀಯ ಮನ್ನಣೆ ಗಳಿಸುವಂತಹ ಚಿತ್ರಗಳೂ ಬರಲಿಲ್ಲ. ಕನ್ನಡ, ಕರ್ನಾಟಕ, ಕನ್ನಡ ಜನತೆಯೊಡನೆ ಭಾವನಾತ್ಮಕ ಸಂಬಂಧಗಳನ್ನು ಕಲ್ಪಿಸುವ, ಹೀರೋ ಕೇಂದ್ರಿತ ಚಿತ್ರಗಳು ಬರಲಾರಭಿಸಿದವು. ವಿಷ್ಣುವರ್ಧನ್, ಅಂಬರೀಷ್ ಮುಂತಾದ ಎರಡನೆಯ ಪೀಳಿಗೆಯ ಕಲಾವಿದರು ಈ ಇಮೇಜಿನಿಂದ ಹೊರಬರಲು ಯತ್ನಿಸಲೇ ಇಲ್ಲ. ಗಿರೀಶ್ ಕಾಸರವಳ್ಳಿ, ನಾಗಾಭರಣ, ಇಂತಹ ಹಲವರನ್ನು ಬಿಟ್ಟರೆ ಉತ್ತಮ ಚಿತ್ರ ನಿರ್ದೇಶಕರನ್ನು ಕನ್ನಡ ಚಿತ್ರರಂಗ ಸೃಷ್ಟಿಸಲೇ ಇಲ್ಲ. ಹಾಗಾಗಿಯೇ ಸತ್ಯಜಿತ್ ರೇ, ಮೃಣಾಲ್ ಸೇನ್, ಶ್ಯಾಂ ಬೆನಗಲ್, ಗೌತಮ್ ಘೋಷ್‌ರವರಂತಹ ಸೃಜನಶೀಲ ನಿರ್ಮಾಪಕ/ನಿರ್ದೇಶಕರು ಕನ್ನಡ ಚಿತ್ರರಂಗದಲ್ಲಿ ಬೆಳೆಯಲು ಸಾಧ್ಯವಾಗಲಿಲ್ಲ.

ರಾಜ್ ಒಂದು ಆಲದ ಮರದಂತೆ ಬೆಳೆದಿದ್ದರು. ಅವರ ಸುತ್ತ ಅನೇಕ ಕಲಾವಿದರು, ತಂತ್ರಜ್ಞರು ಹೊರಹೊಮ್ಮಿದ್ದರು. ಆದಾಗ್ಯೂ ಅವರ ಚಿತ್ರಗಳಿಂದ ಉತ್ತಮ ಕಲಾವಿದರು ಹೊರಹೊಮ್ಮಲು ಸಾಧ್ಯವಾಗಲಿಲ್ಲ. ಬಾಲಕೃಷ್ಣರವರ ಒಂದು ಸ್ಟುಡಿಯೋವನ್ನು ಸಹ ನಮ್ಮ ಚಿತ್ರರಂಗ ಉಳಿಸಿ

ಕೊಳ್ಳಲಾಗಲಿಲ್ಲ. ಈ ಎಲ್ಲಾ ನ್ಯೂನತೆಗಳ ನಡುವೆ ಕನ್ನಡ ಚಿತ್ರರಂಗ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿದ್ದರೆ ಅದಕ್ಕೆ ಕೆಲವೇ ಕೆಲವು ಕಲಾವಿದರು ಕಾರಣರಾಗಿದ್ದಾರೆ. ಪ್ರಸ್ತುತ ಮೂರನೇ ಪೀಳಿಗೆಯ ಕಲಾವಿದರನ್ನು ಕಾಣುತ್ತಿರುವ ಚಿತ್ರರಂಗ ಈಗ ಕವಲುಹಾದಿಯಲ್ಲಿದೆ. ಒಂದೆಡೆ ರೀಮೇಕ್ ಸಂಸ್ಕೃತಿ, ಇನ್ನೊಂದೆಡೆ ಪಾಶ್ಚಿಮಾತ್ಯ ಸಂಸ್ಕೃತಿ ಚಿತ್ರರಂಗವನ್ನು ಆಕ್ರಮಿಸಿದ್ದು, ಕನ್ನಡ ಚಿತ್ರರಂಗ ತನ್ನ ಸ್ವಂತಿಕೆ, ಸೃಜನಶೀಲತೆಗಳನ್ನು ಕಳೆದುಕೊಳ್ಳುತ್ತಿದೆ. ಕಾದಂಬರಿಗಳನ್ನು ಮೀರಿ ಉತ್ತಮ ಸಾಮಾಜಿಕ ಸಂದೇಶ ಸಾರುವ ಚಿತ್ರಗಳನ್ನು ತಯಾರಿಸುವ ಮಟ್ಟಕ್ಕೆ ಕನ್ನಡ ಚಿತ್ರರಂಗ ಏರಲಿಲ್ಲವಾದರೂ, ಇತ್ತೀಚೆಗೆ ಕಾದಂಬರಿಯಾಧಾರಿತ ಚಿತ್ರಗಳೂ ನಶಿಸಿಹೋಗಿರುವುದು ಚಿಂತನಾರ್ಹ.

## ಅಂತಿಮವಾಗಿ...

ಸುವರ್ಣ ಸಂಭ್ರಮದ ಸಂದರ್ಭದಲ್ಲಿ ಒಕ್ಕೊರಲಿನಿಂದ ಸಿರಿಗನ್ನಡಂ ಗೆಲ್ಗೆ ಎಂದು ಹೇಳಬೇಕಿದ್ದ ಕನ್ನಡ ಸಾಹಿತ್ಯ ಲೋಕ ಒಡೆದ ಕನ್ನಡಿಯಂತಾಗಿದೆ. ಪರಸ್ಪರ ದೋಷಾರೋಪಣೆಗಳಿಂದಲೇ ತಮ್ಮ ಅನನ್ಯತೆ ಉಳಿಸಿಕೊಳ್ಳುವ ಸಾಹಿತಿಗಳ ಭ್ರಮಾಲೋಕದಲ್ಲಿ ಕನ್ನಡ ಸಾರಸ್ವತ ಲೋಕ ನಲುಗುತ್ತಿದೆ. ತಮ್ಮದೇ ಆದ ಮಠಗಳನ್ನು ನಿರ್ಮಿಸಿಕೊಳ್ಳುವ ಕವಿ, ಸಾಹಿತಿಗಳ ಚಾಳಿ ಸಾಹಿತ್ಯ ಲೋಕವನ್ನೇ ಕಂಗೆಡಿಸುತ್ತಿದೆ. ಆಂಗ್ಲಭಾಷೆ ಕಲಿಕೆಯಾಗಲೀ, ಆಡಳಿತ ಭಾಷೆಯಾಗಿ ಕನ್ನಡ ಜಾರಿಯಾಗಲಿ. ಕವಿ-ಸಾಹಿತಿಗಳ ನಡುವೆ ಏಕಾಭಿಪ್ರಾಯವಿಲ್ಲದೆ, ವೈಯಕ್ತಿಕ ಪ್ರತಿಷ್ಠೆಗಳೇ ಪ್ರಮುಖವಾಗುತ್ತಿವೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ಗಳಿಸಿರುವ ಸಾಹಿತಿಗಳೂ ತಮ್ಮ ಮಾತಿನ ಧಾಟಿಯ ಮೌಲಿಕ ಅಧಃಪತನ ಪ್ರದರ್ಶಿಸುತ್ತಿರುವುದು, ಸಾಹಿತ್ಯಕ ಬೆಳವಣಿಗೆಯ ದೃಷ್ಟಿಯಿಂದ ತರವಲ್ಲ. ಯುವ ಜನಾಂಗದಲ್ಲಿ ಕ್ಷೀಣಿಸುತ್ತಿರುವ ಸಾಹಿತ್ಯಾಭಿರುಚಿಗೆ ಇಂಬು ನೀಡುವಂತೆ ಪರಿಸ್ಥಿತಿ ಬೆಳೆಯುತ್ತಿದೆ. ಸಂವೇದನೆಯನ್ನು, ಸೃಜನಶೀಲತೆಯನ್ನು ಸೃಷ್ಟಿಸುವ ಸಾಹಿತ್ಯಲೋಕವೇ ಇಂದು ಅವೆರಡನ್ನೂ ಕಳೆದುಕೊಳ್ಳುತ್ತಿದೆ. ಈ ಹಗ್ಗಜಗ್ಗಾಟಗಳ ನಡುವೆ ಕನ್ನಡ ನಲುಗುತ್ತಿದೆ.

ಕನ್ನಡದ ಬೆಳವಣಿಗೆಗಾಗಿ ಯಾವ ಕ್ರಮ ಕೈಗೊಳ್ಳುತ್ತಿದ್ದೇವೆ ಎಂಬುದಕ್ಕಿಂತಲೂ ಹೆಚ್ಚಾಗಿ, ಟಿಪ್ಪು ಕನ್ನಡ ಪರವೋ, ವಿರೋಧಿಯೋ ಎಂಬುದರ ಬಗ್ಗೆ ಹೆಚ್ಚು ಚರ್ಚೆಯಾಗುತ್ತಿರುವುದು, ಈ ವಾದ ವಿವಾದದಲ್ಲಿ ಧೀಮಂತ ಸಾಹಿತಿಗಳೂ ತೊಡಗಿರುವುದು ಸುವರ್ಣ ಕರ್ನಾಟಕದ ದುರಂತ. ಇದಕ್ಕೆ ಪ್ರತಿಯಾಗಿ ಕನ್ನಡ ಪರ ಸಂಘಟನೆಗಳು, ವಾಸ್ತವತೆಗಿಂತಲೂ ಭಾವುಕತೆಗೇ ಹೆಚ್ಚು ಗಮನ ನೀಡುತ್ತಿರುವುದರಿಂದ, ಎಲ್ಲೆಲ್ಲೂ ಕನ್ನಡ ಧ್ವಜ ಹಾರಾಡುತ್ತಿದ್ದರೂ ಕನ್ನಡ ಭಾಷೆ ಮರೆಯಾಗುತ್ತಿದೆ. ಭಾಷಾಭಿಮಾನ ಕೇವಲ ಮನರಂಜನೆಗೆ ಸೀಮಿತವಾಗುತ್ತಿದೆ. ಸಾಮಾಜಿಕ ವಾಸ್ತವತೆಯನ್ನೂ ಬಿಂಬಿಸುವ ನಾಟಕಗಳಿಗಿಂತಲೂ ಭ್ರಮಾಲೋಕಗಳನ್ನು ಸೃಷ್ಟಿಸುವ ಸಿನಿಮಾ ರಂಗ ಆಕರ್ಷಣೀಯವಾಗುತ್ತಿದೆ. ಕವಿ, ಸಾಹಿತಿ ಕಲಾವಿದರಿಗಿಂತಲೂ, ಸಿನಿಮಾ ಹೀರೋಗಳು ಯುವಜನಾಂಗದ ಮಾದರಿಗಳಾಗುತ್ತಿದ್ದಾರೆ. ಈ ಎಲ್ಲ ವಿದ್ಯಮಾನಗಳಿಂದ ಯುವ ಜನತೆ ದಿಕ್ಕು ತಪ್ಪುತ್ತಿದೆ. ಹಿಂಸೆ, ಅಶ್ಲೀಲತೆ ಸಮಾಜದಲ್ಲಿ ತಾಂಡವವಾಡುತ್ತಿವೆ. ಸಮಾಜ ಕ್ರಮೇಣ ತನ್ನ ಸ್ವಾಸ್ಥ್ಯವನ್ನು ಕಳೆದುಕೊಳ್ಳುತ್ತಿದೆ. 'ಗುಡಿ, ಚರ್ಚು, ಮಸಜೀದಿಗಳ ಬಿಟ್ಟು ಹೊರಬನ್ನಿ', 'ಕಟ್ಟುವೆವು ನಾವು ಹೊಸ ನಾಡೊಂದನು', 'ಏನಾದರೂ ಆಗು ಮೊದಲು ಮಾನವನಾಗು' ಎಂಬ ಕವಿ ನುಡಿಗಳು ದಟ್ಟಡವಿಗಳಲ್ಲಿ ಎಲ್ಲೋ ಮರೆಯಾದಂತಿದೆ.

ಸುವರ್ಣ ಮಹೋತ್ಸವ ಆಚರಿಸುವಾಗಲೂ ಆಡಂಬರ, ಭಾವೋನ್ಮಾದಗಳೇ ಹೆಚ್ಚಾಗಿ

ಕಾಣುತ್ತಿದ್ದುದು ವಿಷಾದನೀಯ. ರಾಜ್ಯೋತ್ಸವವನ್ನು ಅದ್ದೂರಿಯಾಗಿ ಮಾಡುವುದೊಂದೇ ಸುವರ್ಣ ಕರ್ನಾಟಕದ ಆಚರಣೆಯಾಗಿ ಪರಿಣಮಿಸಿರುವುದು, ಈ ಸುಸಂದರ್ಭದ ವಿಡಂಬನೆ. ಘೋಷಣೆಗಳಲ್ಲಿ, ಭಾವನೆಗಳಲ್ಲಿ ಸಾರ್ಥಕತೆ ಕಂಡುಕೊಳ್ಳುವುದರಿಂದ, ವಾಸ್ತವತೆ ಮರೆಯಾಗುತ್ತದೆ. ಹಾಗಾಗಿಯೇ ಕಡಕೋಳದ ಘಟನೆ ಈ ಶುಭ ಸಂದರ್ಭದಲ್ಲಿ ಪ್ರಾಮುಖ್ಯ ಪಡೆಯಲೇ ಇಲ್ಲ. ಬೆಳಗಾವಿಯ ಬಗ್ಗೆ ವ್ಯಕ್ತವಾದ ಭಾವುಕತೆ ಕಡಕೋಳದ ಬಹಿಷ್ಕೃತ ದಲಿತರ ಬಗ್ಗೆ ವ್ಯಕ್ತವಾಗಲಿಲ್ಲ. ಇಂಗ್ಲಿಷ್ ಕಲಿಕೆಯ ಬಗ್ಗೆ ನಡೆದ ಚರ್ಚೆ, ಪರ-ವಿರೋಧ ವಾದಗಳು ಕನ್ನಡ ಮಾಧ್ಯಮದ ಅನುಷ್ಠಾನದ ಬಗ್ಗೆ ನಡೆಯಲಿಲ್ಲ. ಇವೆಲ್ಲವೂ ಎಲ್ಲೋ ಒಂದು ಕಡೆ ಸಮಾಜದಲ್ಲಿ ಸುಪ್ತವಾಗಿರುವ ಅವ್ಯಕ್ತ ಪ್ರಜ್ಞೆಯನ್ನು ಪ್ರತಿಬಿಂಬಿಸುತ್ತದೆ.

ಈ ದೃಷ್ಟಿಕೋನದಿಂದ ನೋಡಿದಾಗ ಸುವರ್ಣ ಕರ್ನಾಟಕದ ಸಂದರ್ಭ ಅಷ್ಟೇನೂ ಹಿತಕರವೆನಿಸುವುದಿಲ್ಲ. ೫೦ ವರ್ಷಗಳಲ್ಲಿ ರಾಜ್ಯ, ಆರ್ಥಿಕವಾಗಿ, ಸಾಮಾಜಿಕವಾಗಿ, ಭೌತಿಕವಾಗಿ, ಇನ್ನೂ ಹೆಚ್ಚು ಅಭಿವೃದ್ಧಿ ಸಾಧಿಸಬಹುದಿತ್ತು. ಒಂದು ಹಂತದಲ್ಲಿ ಬಂಡವಾಳಶಾಹಿ ವ್ಯವಸ್ಥೆ ಅಭಿವೃದ್ಧಿಗೆ ಕಂಟಕವಾಗಿದ್ದರೆ, ಈಗ ಜಾಗತೀಕರಣ ಆ ಸ್ಥಾನವನ್ನಾಕ್ರಮಿಸಿದೆ. ಈ ಪ್ರಜಾ ವಿರೋಧಿ ಪ್ರಕ್ರಿಯೆಗಳನ್ನು ವಿರೋಧಿಸಿ ಹೋರಾಡುವ ಸಂಸದೀಯ ಎಡಪಕ್ಷಗಳ ಪ್ರಾಬಲ್ಯ ಕ್ಷೀಣಿಸುತ್ತಿದೆ. ಇನ್ನೊಂದೆಡೆ ಅನೇಕ ಪ್ರಜಾತಾಂತ್ರಿಕ ಚಳುವಳಿಗಳು ಜಾಗತೀಕರಣದ ಅಲೆಯಲ್ಲಿ ಕೊಚ್ಚಿಹೋಗುತ್ತಿವೆ. ಆದರೂ ಕನ್ನಡ ನಾಡಿನ ಜನತೆ ನಿರಾಶರಾಗಬೇಕಿಲ್ಲ. ಎಲ್ಲೋ ಒಂದು ಕಡೆ ಹೋರಾಟದ ಕಿಡಿಗಳು ತಮ್ಮ ಇರುವಿಕೆಯನ್ನು, ಪ್ರಸ್ತುತತೆಯನ್ನು ವ್ಯಕ್ತಪಡಿಸುತ್ತಿವೆ. ಎಷ್ಟೇ ಒಡಕುಂಟಾದರೂ ದಲಿತ ಚಳುವಳಿಯ ಬೇರುಗಳು ಇನ್ನೂ ಗಟ್ಟಿಯಾಗಿವೆ. ರಾಜಕೀಯವಾಗಿ ಕುಂದಿರುವ ಎಡಪಕ್ಷಗಳು, ಪ್ರಜಾ ಚಳುವಳಿಗಳ ಮೂಲಕ, ತಮ್ಮ ಹೋರಾಟವನ್ನು ನಡೆಸುತ್ತಿವೆ. ಸಾಂಸ್ಕೃತಿಕವಾಗಿ ಕುವೆಂಪುರವರ ಕಾವ್ಯಗಳಲ್ಲಿ, ಬೇಂದ್ರೆಯವರ ಪದ್ಯಗಳಲ್ಲಿ, ಅಡಿಗರ ಕವನಗಳಲ್ಲಿ, ಕಾರಂತರ ಮಹಾನ್ ಕೃತಿಗಳಲ್ಲಿ, ಕಾರ್ನಾಡರ ನಾಟಕಗಳಲ್ಲಿ, ಭೈರಪ್ಪನವರ ಸಾಹಿತ್ಯ ಕೃತಿಗಳಲ್ಲಿ, ಲಂಕೇಶ್-ದೇವನೂರು-ಸಿದ್ಧಲಿಂಗಯ್ಯನವರ ಕ್ರಾಂತಿಕಾರಿ ಕೃತಿಗಳಲ್ಲಿ, ಮತ್ತು ಸಾರಸ್ವತ ಲೋಕದ ನೂರಾರು ಮಹಾನ್ ಚೇತನಗಳ ಸಾಹಿತ್ಯ ಕೃತಿಗಳಲ್ಲಿ, ನಾಡಿನ ಭವ್ಯ ಪರಂಪರೆ ಹುದುಗಿದೆ; ಕನ್ನಡಿಗರ ಭವಿಷ್ಯ ಅಡಗಿದೆ. ಆದರೆ ಕನ್ನಡದ ಕಲೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕವನ್ನು ಹೊರತುಪಡಿಸಿ, ಕನ್ನಡಿಗರ ಸಮಾಜೋ-ಆರ್ಥಿಕ ಅಭಿವೃದ್ಧಿಯನ್ನು ಕಡೆಗಣಿಸಿ ಕನ್ನಡತನವನ್ನು ಹುಡುಕುವುದು ವ್ಯರ್ಥವಾಗುತ್ತದೆ. ಸುವರ್ಣ ಕರ್ನಾಟಕದ ಈ ಸಂದರ್ಭದಲ್ಲಿ ಈ ಸತ್ಯವನ್ನು ಗ್ರಹಿಸುವುದರಲ್ಲಿಯೇ ಕನ್ನಡಿಗರ ಶ್ರೇಯಸ್ಸು ಅಡಗಿದೆ. ಇದನ್ನು ಸಾರ್ಥಕಗೊಳಿಸುವುದು ನಮ್ಮ ಕೈಯಲ್ಲೇ ಇದೆ.

೫೦೪, ಚಿರಂತನ, ೧೩ನೇ ಅಡ್ಡರಸ್ತೆ,
ಶ್ರೀರಾಂಪುರ ೨ನೇ ಹಂತ
ಮೈಸೂರು - ೫೭೦ ೦೨೩

ಸಾಹಿತ್ಯ ಸ್ಪರ್ಧೆಯ ಬಹುಮಾನಿತ ಲೇಖನ

# ಹೊಸತು–ಹಳತುಗಳ ಸಂಘರ್ಷದ ಕಥನ

## ಕುಂ.ವೀ.ಯವರ 'ಕುಬುಸ' ಕಥೆಯ ವಿಶ್ಲೇಷಣೆ

◆ ಅರುಣ್ ಜೋಳದ ಕೂಡ್ಲಿಗಿ



**ಕುಂ.** ವೀ.ಯ ಕಥಾ ಲೋಕದಲ್ಲಿ ವಿಶ್ಲೇಷಣೆಗೆ ಆಯ್ದುಕೊಂಡದ್ದು 'ಕುಬುಸ' ಕಥೆ. ಈ ಆಯ್ಕೆಗೆ ಕಾರಣಗಳಿವು; ಕುಂ.ವೀ. ಎಂಬ ಶಬ್ದ ಕಿವಿಗೆ ಬಿದ್ದೊಡನೆ ಒಂದು ಕಥಾ ಜಗತ್ತು ಅನಾವರಣಗೊಳ್ಳುತ್ತದೆ. ಅದರ ಜೊತೆಗೆ ಕುಂ.ವೀ.ಗೇ ವಿಶಿಷ್ಟವಾದ ಭಾಷೆ, ವಸ್ತು, ತಂತ್ರ ಕಥನಗಾರಿಕೆಯೂ ಕೂಡ. ಇವುಗಳನ್ನೆಲ್ಲ ಸಮ ಪ್ರಮಾಣದಲ್ಲಿ ಒಳಗೊಂಡದ್ದು 'ಕುಬುಸ'. ಈ ಕಥೆಯನ್ನು ಕುಂ.ವೀ.ಯವರ ಒಟ್ಟು ಕಥನಗಾರಿಕೆಯ ತಾತ್ವಿಕ ಪ್ರಣಾಳಿಕೆಯಂತೆಯೂ ನೋಡಬಹುದು.

ಬಳ್ಳಾರಿ ಪರಿಸರದ ವಡ್ಡಟ್ಟಿ ಒಂದು ಕುಗ್ರಾಮ ಅಕ್ಷರ ಲೋಕದ ನಾಗರಿಕ ಜಗತ್ತಿನ ಗಂಧಗಾಳಿಯೂ ಸುಳಿಯದ ಹಳ್ಳಿ. ಇದರ ನಡುವೆಯೂ ಬಂಡೆವ್ವಜ್ಜಿಯ ಮೊಮ್ಮಗ 'ನೆಟ್ಟಕಲ್ಲು' ಅಕ್ಷರ ಕಲಿತು ನೌಕರಿ ಹಿಡಿದು, ನಗರದಲ್ಲಿ ನೆಲೆಯೂರುತ್ತಾನೆ. ಸಹಜವಾಗಿ ತನ್ನ ಕುಗ್ರಾಮವನ್ನು ನೆನಪಿಸಿಕೊಳ್ಳುತ್ತಲೇ ನಗರಕ್ಕೆ ಬೆರಗುಗೊಳ್ಳುತ್ತಾನೆ. ಕಮಲಳೊಂದಿಗೆ ಮದುವೆಯೂ ಆಗುತ್ತದೆ. ಮನೆ ಕೆಲಸಕ್ಕೆಂದೂ, ಸಹಾಯಕ್ಕೆಂದೂ

ಹಳ್ಳಿಯಲ್ಲಿದ್ದ ಅಜ್ಜಿಯನ್ನು ನಗರಕ್ಕೆ ಕರೆತರುತ್ತಾನೆ. ಅಜ್ಜಿ ಪರಂಪರೆಯಂತೆ ಕುಬುಸ ತೊಡದವಳು. ಆ ಕಾರಣಕ್ಕಾಗಿಯೇ ನಗರವಾಸಿಗಳಿಗೆ ಅಜ್ಜಿ ಕೌತುಕದ ಗೊಂಬೆಯಾಗುತ್ತಾಳೆ. ಬ್ಲೌಸ್‌ಲೆಸ್ ಮುದುಕಿಯ ಬಗ್ಗೆ ತರಾವರಿ ಕತೆಗಳು, ನೆಟ್ಟಕಲ್ಲುಗೆ ಮುಜುಗರಗಳು ಒಟ್ಟೊಟ್ಟಿಗೇ ಆಗುತ್ತವೆ. ಆಗ ನೆಟ್ಟಕಲ್ಲು, ಅವನ ಹೆಂಡತಿ ಕಮಲ ಅಜ್ಜಿಗೆ ಕುಬುಸ ತೊಡಿಸುವ ಹಟಕ್ಕೆ ಬೀಳುತ್ತಾರೆ. ಅಜ್ಜಿ ನಿರಾಕರಿಸಿ ಮತ್ತೆ ಹಳ್ಳಿಗೆ ಮರಳುತ್ತಾಳೆ. ಇದು ಕಥಾ ಭೂಮಿಕೆ.

ಈ ಕಥೆ ಹಲವು ಸಂಘರ್ಷಗಳನ್ನೂ ರಾಜಿ ಮಾಡಿಕೊಳ್ಳುವಿಕೆಯನ್ನೂ ಜೊತೆ ಜೊತೆಗೇ ಸಾಗಿಸುತ್ತದೆ. ಮೊದಲ ನೋಟಕ್ಕೆ ಗ್ರಾಮ, ನಗರ, ಅಕ್ಷರ - ಅನಕ್ಷರ, ಸಂಪ್ರದಾಯ-ಆಧುನಿಕತೆ, ಭೂತ-ವರ್ತಮಾನ, ಅಜ್ಜಿ-ಮೊಮ್ಮಗ ಈ ಬೈನರಿಗಳ ಮುಖಾಮುಖಿಯೇ ಕಥನವಾದಂತೆ ಕಾಣುತ್ತದೆ. ಅದು ನಿಜವೂ ಕೂಡ. ಕಥನದ ಪ್ರಾರಂಭವೇ ವಡ್ಡಟ್ಟಿ ಎಂಬ ಗ್ರಾಮವನ್ನು ರೋಚಕವಾಗಿ ಪರಿಚಯಿಸುವಲ್ಲಿ; "ವಡ್ಡಟ್ಟಿ ವಿನಾ ದುಸರಾ ಪ್ರಪಂಚ ನೋಡಿದವರಲ್ಲ, ಅವರು ಹೊರ ಪ್ರಪಂಚದ ಉಸಾಬರಿಗೂ ಹೋದವರಲ್ಲ..." ಎನ್ನುವಲ್ಲಿ ವಡ್ಡಟ್ಟಿಯು ನಾಗರಿಕ ಜಗತ್ತಿನಿಂದ ತುಂಬಾ ದೂರವೇ ಇರುವ ಊರು ಎನ್ನುವುದಕ್ಕೆ ಹತ್ತು ಹಲವು ವಿವರ ನೀಡಿ ಸಮರ್ಥಿಸುತ್ತಾರೆ. ಈ ಸಮರ್ಥನೆಯೇ ಕಥನದ ಇನ್ನೊಂದು ಆಯಾಮವನ್ನು ಬಿಟ್ಟುಕೊಡುತ್ತದೆ. ಅದೆಂದರೆ ನಗರದೆದುರು ಹಳ್ಳಿಯನ್ನು ತುಲನೆ ಮಾಡುವುದು. ನೆಟ್ಟಕಲ್ಲು ಅಕ್ಷರ ಕಲಿಯುವುದು, ನೌಕರಿ ಹಿಡಿಯುವುದೂ ಬೆಂಗಳೂರಿನಲ್ಲಿ, ಇವುಗಳು ತನ್ನದಲ್ಲದ್ದು ಎಂದು ದೂರವಿಟ್ಟ ಸಂಗತಿಗಳನ್ನು ತನ್ನೊಳಗೆ ಕರೆದುಕೊಂಡಾಗಿನ ಕೌತುಕಗಳನ್ನು ಚಿತ್ರಿಸುತ್ತವೆ. ನೆಟ್ಟಕಲ್ಲು ಆಧುನಿಕತೆಯ ಬೆರಗಿಗೆ ತನ್ನ ಪರಂಪರೆಯನ್ನು ಯಾವ ವಿಷಾದವೂ ಇಲ್ಲದೆ ಬಿಟ್ಟುಕೊಡುವವನು. ಹಾಗಾಗಿಯೇ ತನ್ನ ನಡೆ-ನುಡಿ, ವರ್ತನೆಗಳನ್ನೆಲ್ಲಾ ನಗರೀಕರಣಗೊಳಿಸಿ ಕೊಂಡವನು. ಆಗ ಅವನ ನಿರೀಕ್ಷೆಯೂ ಅಕ್ಷರ ಕಲಿತ ನಯ ನಾಜೂಕಿನ ಮಡದಿಯ ಕಡೆಗೇ ಇತ್ತು. ಅಂತೆಯೇ ಕಮಲಳ ಮದುವೆಯೂ ಇದನ್ನು ಬೆಂಬಲಿಸಿತು.

ಕಥೆಯ ಮುಖ್ಯ ಕೇಂದ್ರ ಕುಬುಸ. ಕುಬುಸ, ರವಿಕೆ, ಬ್ಲೌಸ್, ಜಾಕೆಟ್ ಮುಂತಾದ ಪದಗಳಿಂದ ಕರೆಯಲ್ಪಟ್ಟರೂ ಬಂಡೆವ್ವಜ್ಜಿ ಕುಬುಸ ತೊಡದಿರುವುದೇ ನಾಗರಿಕ ಜಗತ್ತಿಗೊಂದು ಕೌತುಕ. ಈ ಕುತೂಹಲವೇ ಕಥನದ ಒಟ್ಟು ತಂತ್ರವನ್ನು ನಿರ್ವಹಿಸಿರುವುದು. ನೆಟ್ಟಕಲ್ಲು ಈಗ 'ಎನ್.ಕೆ. ವಡವಟ್' ಎಂದು ಹೆಸರು ಬದಲಾಯಿಸಿಕೊಂಡಿದ್ದಾನೆ. ವಡವಟ್ ತನ್ನ ಮಕ್ಕಳನ್ನು ನೋಡಿಕೊಳ್ಳಲೆಂದು ತನ್ನ ಅಜ್ಜಿಯನ್ನು ಕರೆತರುತ್ತಾನೆ. ಕುಬುಸವಿಲ್ಲದ ಅಜ್ಜಿಯನ್ನು ನೋಡಿ ಬಸ್ಸಿನಲ್ಲಿ ಜನ ಭಿನ್ನವಾಗಿ ಪ್ರತಿಕ್ರಿಯಿಸುತ್ತಾರೆ. ವಡವಟ್ಟನಿಗೆ ಮುಜುಗರವಾಗುತ್ತದೆ. ಮನೆಗೆ ಕರೆತಂದಾಗಲೂ 'ಬ್ಲೌಜ್‌ಲೆಸ್ ಮುದುಕಿ' ಎನ್ನುವ ಪದವೇ ಹಲವರ ಬಾಯಲ್ಲಿ ವಸ್ತುವಾಗುತ್ತದೆ. ಇದರಿಂದಾಗಿ ವಡವಟ್ ಮತ್ತು ಹೆಂಡತಿ ಸೇರಿ ಮುದುಕಿಗೆ ಬ್ಲೌಸ್ ತೊಡಿಸಲು ಪ್ರಯತ್ನಿಸುತ್ತಾರೆ. ಅಜ್ಜಿ ಖಡಾಖಂಡಿತವಾಗಿ ನಿರಾಕರಿಸಿ, ತನ್ನ ಹಳ್ಳಿಗೆ ಹಿಂತಿರುಗುತ್ತಾಳೆ. ಈ ಚಿತ್ರ ಪರಂಪರೆ – ಆಧುನಿಕತೆಯ ಸಂಘರ್ಷವನ್ನು ಹೇಳುತ್ತದೆ. ಹೊಸ ತಲೆಮಾರಿನ ಪ್ರತಿನಿಧಿಗಳಾದ ವಡವಟ್ – ಕಮಲ ಪರಂಪರೆಯನ್ನು ನಿರಾಕರಿಸುತ್ತಾರೆ; ನಿರಾಕರಿಸಲು ಅಜ್ಜಿಯನ್ನು ಒತ್ತಾಯಿಸುತ್ತಾರೆ. ಹಳೆ ತಲೆಮಾರಿನ ಅಜ್ಜಿ ಗಟ್ಟಿಯಾಗಿ ತನ್ನ ಪರಂಪರೆಯನ್ನು ಉಳಿಸಿಕೊಳ್ಳುತ್ತಾಳೆ. ಇಡೀ ಕಥೆಯಲ್ಲಿ ಈ ಲಾಜಿಕ್ ತೀವ್ರವಾಗಿ ನಿರೂಪಿತವಾಗಿದೆ.

ಇಲ್ಲಿ ನಿರೂಪಕ ಎಲ್ಲವನ್ನೂ ಮೂರನೆಯವನಾಗಿ ಹೇಳುತ್ತಾ ಹೋಗುತ್ತಾನೆ. ಓದುಗರು ಕೇಳಿಸಿಕೊಳ್ಳುತ್ತಾರೆ. ನಿರೂಪಕನಿಗೆ ಗ್ರಾಮ್ಯವೂ ತನ್ನ ಜೀವನಾಡಿ, ನಗರವೂ ಬದುಕಿನ ಅನಿವಾರ್ಯತೆ ಎಂಬುದನ್ನು ಹೇಳುವ ಧೋರಣೆ ಇದೆ. ಕನ್ನಡದ ಕಥನ ಪರಂಪರೆಯನ್ನು ಒಮ್ಮೆ ನೆನಪಿಸಿಕೊಳ್ಳೋಣ.

ಗ್ರಾಮೀಣ ಬರಹಗಾರನೊಬ್ಬ ತನ್ನ ಅನುಭವವನ್ನೇ ಬಂಡವಾಳವನ್ನಾಗಿಸಿಕೊಂಡು, ಇದ್ಯಾವುದೂ ಗೊತ್ತಿರದ, ಅಕ್ಷರವಂತ ನಗರ ಸಮುದಾಯದವರಿಗೆ ರೋಚಕವಾಗಿ, ರೊಮ್ಯಾಂಟಿಕ್ಕಾಗಿ ಹೇಳುವುದೊಂದು ಕ್ರಮವಿದೆ. ಇನ್ನು ಅದೇ ಗ್ರಾಮೀಣ ದಲಿತ ಬದುಕನ್ನು ತುಂಬಾ ಗಂಭೀರವಾಗಿ ನಗರದ ಓದುಗರನ್ನು ಎದುರಿಗಿಟ್ಟುಕೊಳ್ಳದೆ ಸ್ವಗತದ ಮಾದರಿಯಲ್ಲಿ ನಿರೂಪಿಸುವ ಇನ್ನೊಂದು ಕ್ರಮವಿದೆ. ಮೊದಲ ಕ್ರಮ ಗ್ರಾಮೀಣ ಬದುಕನ್ನು, ತಳ ಸಮುದಾಯಗಳ ಸಾಂಸ್ಕೃತಿಕ ವೈವಿಧ್ಯವನ್ನು ಹೇಳುವಾಗ ರೋಚಕತೆಯ ಕಾರಣಕ್ಕಾಗಿ, ಅತಿ ರಂಜನೆಯೂ ವಿಡಂಬನೆಯೂ ಹಾಸ್ಯವೂ ಸೇರಿ ಕಥನದ ಗಂಭೀರತೆಯನ್ನು ಕಾಯ್ದುಕೊಳ್ಳುವುದಿಲ್ಲ. ಎರಡನೆಯ ಕ್ರಮ, ಕಥನವನ್ನು ಗಂಭೀರವಾಗಿ ನಿರೂಪಿಸುತ್ತದೆ. ಆದರೆ ಓದುಗರನ್ನು ರಂಜಿಸಬೇಕೆಂಬ, ಕುತೂಹಲ ಕೆರಳಿಸಬೇಕೆಂಬ ಹಟ ಇರುವುದಿಲ್ಲ. ಕುಂ.ವೀ.ಯವರು ಮೊದಲ ಕ್ರಮದ ಕಥೆಗಾರರಾದರೆ, ದೇವನೂರು ಮಹಾದೇವ ಎರಡನೇ ಕ್ರಮದ ಕಥೆಗಾರರು. 'ಕುಬುಸ' ಕಥೆಯೂ ಮೊದಲನೇ ಪ್ರಕಾರಕ್ಕೆ ಸಮರ್ಥವಾದ ರೂಪಕ.

ಕಥೆಯ ಹೆಚ್ಚುಗಾರಿಕೆಯಿರುವುದು ಒಂದು ಕಾಲದ ಸಾಮಾಜಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಸಮರ್ಥವಾಗಿ ದಾಖಲಿಸುವಲ್ಲಿ. ವಡ್ಡಟ್ಟಿಯ ಭೌಗೋಳಿಕ ವಿವರ ಅಲ್ಲಿನ ಬದುಕನ್ನು ಹೇಗೆ ರೂಪಿಸಿದೆ ಎನ್ನುವುದು, ಸರ್ಕಾರದ ಯಾವ ಸೌಲಭ್ಯಗಳೂ ವಡ್ಡಟ್ಟಿಗೆ ಸಿಗದಿರುವ ಬಗೆಗೆ ಸಾಮಾಜಿಕ ಕಳಕಳಿಯಿರುವುದು. ನಿಸರ್ಗದ ಜೊತೆಗಿನ ಬದುಕು, ನಿಸರ್ಗದೊಂದಿಗೆ ವಿಮುಖವಾಗುತ್ತಿರುವ ಚಲನೆಗಳು ವಿಸ್ತರಿಸಿಕೊಂಡಿರುವುದು ಕಥನದ ಸಾಧ್ಯತೆಗಳನ್ನು ವಿಸ್ತರಿಸುತ್ತದೆ.

ಪರಂಪರೆಯನ್ನು ಕಳೆದುಕೊಳ್ಳುತ್ತಿರುವ ಆತಂಕವಾದಿ ದೃಷ್ಟಿಕೋನ ಕನ್ನಡ ಕಥನ ಪರಂಪರೆಯಲ್ಲಿ ಹೊಸತೇನಲ್ಲ. ಆದರೆ ಅದರೊಂದಿಗೆ ಪರ್ಯಾಯಗಳನ್ನು ಸೂಚಿಸುವುದು, ಕಳೆದುಕೊಳ್ಳುತ್ತಿದ್ದುದರ ಹೊಸ ರೂಪಗಳನ್ನು ಶೋಧಿಸುವುದು ಆಶಾವಾದವನ್ನು ಬಿಂಬಿಸುತ್ತದೆ. ಕುಬುಸ ಕಥೆಯೂ ಇಂತಹುದೇ ಸಿದ್ಧ ಸೂತ್ರ. ಪ್ರಚಲಿತ ಮಾದರಿಯ ತಂತ್ರವಾದರೂ ಹೊಸ ರೂಪಗಳ ಶೋಧದಲ್ಲಿ ಕಥೆ ಹೆಚ್ಚು ಪ್ರಸ್ತುತವಾಗುತ್ತದೆ. ಅಜ್ಜಿ ಕುಬುಸ ತೊಡುವ ಕನ್ನೆಯನ್ನು ಮದುವೆಯಾಗಲು ನಿರಾಕರಿಸಿದಾಗ ವಡವಟ್ ಹೇಳುವ ಮಾತು, "ಕಾಲ ಬದಲಾಗಿದೆ ಎಂದೂ, ಉಡುಸಲ್ಲಮ್ಮನ ಎದೆ ಮುಚ್ಚುವಂಥ ಕುಬುಸ ಬೇಕಿರುವುದೆಂದೂ, ವಡ್ಡಟ್ಟಿಯ ಪ್ರತಿಯೋರ್ವ ಮಹಿಳೆ ಕುಬುಸ ತೊಡಬೇಕಿರುವುದೆಂದೂ, ಕುಬುಸ ನಾಗರಿಕ ಸಮಾಜದ ಲಕ್ಷಣವೆಂದೂ ಗಟ್ಟಿಯಾಗಿ ಹೇಳುವ ಪ್ರಯತ್ನ ಮಾಡಿ ಗ್ರಾಮಸ್ಥರಿಂದ ಅನೇಕ ವಿಧದ ಪ್ರತಿಭಟನೆಯನ್ನು ಎದುರಿಸಿದ" ಎನ್ನುವಲ್ಲಿ ಹಳತು-ಹೊಸತಿನ ಸಂಘರ್ಷಗಳ ಸೂಕ್ಷ್ಮತೆಯನ್ನು ಅರಿಯಬಹುದು.

ಕುಂ.ವೀ. ಕಥನದ ಕೊಟ್ಟೂರು ಭಾಷೆಯ ಗಡುಸುತನ, ನವಿರು ಹಾಸ್ಯ ಮಿಶ್ರಿತ ರೂಪಕಗಳ ಭಾಷೆ, ವಿಡಂಬನಾತ್ಮಕ ರೋಚಕತೆ, ಕಥೆ ಹೇಳುವ ಭಿನ್ನ ವೈಖರಿ ಎಲ್ಲವೂ ಕುಬುಸ ಕಥೆಯಲ್ಲಿ ಮೇಳೈಸಿಕೊಂಡಿವೆ. ಇದು ಒಂದು ಯಶಸ್ವಿ ಕಥೆಯಂತೆಯೇ ಅಪೂರ್ವ ಕಥೆಯೂ ಹೌದು. ಒಂದು ವಸ್ತುವನ್ನು ರೋಚಕವಾಗಿ ಹೇಳುವ ಭರದಲ್ಲಿ ಅದರ ಸಹಜ ಮುಖವನ್ನು ಮಾತ್ರ ತೋರಿಸುವ, ಅಂತೆಯೇ ಅದರ ಇನ್ನೊಂದು ಮುಖ್ಯವಾದ ಕಾರ್ಯವನ್ನು ತಣ್ಣಗೆ ಮರೆಮಾಚುವುದೇ ಈ ಕಥನದ ಮಿತಿ. ಕುಬುಸ ತೊಡದಿರುವುದಕ್ಕೆ ಬಂಡೆಜ್ಜಿಯು ಹೇಳುವ ಕಾರಣ 'ಮನೆ ದೇವತೆ ಉಡುಸಲಮ್ಮನೇ ಕುಬುಸ ತೊಡದಿರುವಾಗ ನರಮಾನವರಾದ ನಾವು ತೊಡುವುದುಂಟೆ' ಎನ್ನುವ ಅಜ್ಜಿಯ, ಊರಿನವರ ನಂಬಿಕೆಯೇ ಆದರೂ, ಇಂತಹ 'ನಂಬಿಕೆ'ಯನ್ನು ಹುಟ್ಟುಹಾಕಿದ ವರ್ಗದ ಆಶಯಗಳನ್ನು ಕತೆಗಾರರು ಚರ್ಚಿಸುವುದಿಲ್ಲ. ನೆಟ್ಕಲ್ಲು ಜವಾನನಾದಾಗ ನಗರದ ಜಾಯಮಾನಕ್ಕೆ ಹೊಂದಿಕೊಳ್ಳುವ ಬಗ್ಗೆ ಇಲ್ಲಿ

ಹೆಚ್ಚು ಗಮನ ಹರಿದಿದೆ. ಆದರೆ ನೆಟ್ಟಕಲ್ಲು ಅನುಭವಿಸುವ ತಲ್ಲಣ, ತವಕ ಸಹಜವಾಗಿ ಕಛೇರಿಯ ಮೇಲಧಿಕಾರಿಗಳು ಗ್ರಾಮೀಣ ಮುಗ್ಧತೆಯನ್ನು 'ಅಧಿಕಾರಿ' ದರ್ಪದಿಂದ ದುರುಪಯೋಗ ಮಾಡಿಕೊಳ್ಳುವ ಕ್ರಮವಿಲ್ಲಿ ಕಾಣುವುದಿಲ್ಲ. ಹೀಗೆ ಕಥೆಯಲ್ಲಿ ಕುರೂಪ, ಕ್ರೌರ್ಯವನ್ನು ಮುಚ್ಚಿಡುವ ಚೆಲುವು ಆಕರ್ಷಕವಾದದ್ದನ್ನು ರೊಮ್ಯಾಂಟಿಕ್ ಆಗಿ ವರ್ಣಿಸುವ ಹಲವು ಮಾದರಿಗಳು ಸಿಗುತ್ತವೆ. ಕಥೆಯಲ್ಲಿ 'ಇರುವುದನ್ನು' ವಿಶ್ಲೇಷಿಸುವುದು, ಸರಿ ಇಲ್ಲದ್ದನ್ನು ಪಟ್ಟಿ ಮಾಡುವುದು ಯಾಂತ್ರಿಕವಾಗಿ ಕಂಡರೂ ಒಂದು ಕಥೆಯ ಮೌಲ್ಯ ನಿರ್ಧಾರದಲ್ಲಿ ಈ ಎರಡೂ ದಾರಿಗಳು ಮುಖ್ಯವೆನ್ನುವುದು ನನ್ನ ನಂಬಿಕೆ.

ಈ ಎಲ್ಲ ಮಾತುಗಳನ್ನು ಕುಂ.ವೀ.ಯವರ ಒಟ್ಟು ಕಥನದ ತಾತ್ವಿಕ ಸ್ವರೂಪದಂತೆಯೂ ವಿಸ್ತರಿಸಬಹುದು. ಇದೆಲ್ಲದರ ಮಧ್ಯೆಯೂ ಒಬ್ಬ ಓದುಗನ ಜಾಗದಲ್ಲಿ ನಿಂತು ಕಥೆಯನ್ನು ಮುಕ್ತವಾಗಿ ಓದಿದರೆ ಅದು ಕೊಡುವ ಖುಷಿಯೇ ಕಥೆಯ ಯಶಸ್ಸನ್ನು ನಿರ್ಧರಿಸುತ್ತದೆ. ಕೊನೆಯದಾಗಿ ಒಂದು ಮಾತನ್ನು ಹೇಳಬಹುದು — ನಾನು ಮೊದಲ ಭಾಗದಲ್ಲಿ ಪ್ರಸ್ತಾಪಿಸಿದ ಅವಳಿ ವೈರುಧ್ಯಗಳ ಮುಖಾಮುಖಿಯಲ್ಲಿ ಈ ಕಥನದ ಜೀವಾಳವಿದೆ. ಹಾಗಾಗಿ ವಿರೋಧಿ ನೆಲೆಯನ್ನು ಎದುರಿಗಿಟ್ಟುಕೊಂಡು ವಿಸ್ತರಿಸಹೊರಟ ಯಾವುದೇ ಕಥನವೂ ವಿರೋಧಿ ನೆಲೆಯಾಚೆ ನಿಲ್ಲಲಿಕ್ಕಾಗುವುದಿಲ್ಲ ಅಥವಾ ವಿರೋಧಿ ನೆಲೆಯನ್ನು ಮೀರಲಿಕ್ಕಾಗುವುದಿಲ್ಲ. ಹೀಗೆ ಎದುರುಬದುರುಗೊಳ್ಳುವಿಕೆಯ ವಿಧಾನವೇ ಅವೆರಡರ ಮಧ್ಯೆ ಜೀವಿಸುತ್ತದೆ. ಅದರಾಚೆಯ ವಿಶಾಲ ಜಗತ್ತೊಂದು ಅನಾವರಣಗೊಳ್ಳುವುದೇ ಇಲ್ಲ. ವಿರೋಧಿಯಾಚೆಗಿನ ಜಗತ್ತು ಕಾಣುವುದೇ ಇಲ್ಲ. ಬಹುಶಃ ಈ ಮಿತಿಯೂ 'ಕುಬುಸ' ಕಥೆಯದು.



ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
ಹೊಸಪೇಟೆ (ತಾ), ಬಳ್ಳಾರಿ (ಜ)



# ಕರ್ಬಲಾ ಕುಣಿತ

ಬೆಳಕು ಎಷ್ಟಗಲ ವ್ಯಾಪಿಸುತಿದೆ ಕತ್ತಲು ತಂಪನೀಯುತಿದೆ
ನಿನ್ನ ಕತ್ತಿಯ ಮೇಲೆ ನನ್ನ ಹೆಸರು ಬರೆಸಿದ್ದೇನೆ
ಹರಕೆಯ ತಲೆ ಕಾಯುತ್ತಿದೆ.

ಅಪಶಕುನವೊಂದು ಹುಟ್ಟಿಬಂದಂತೆ ಕರ್ಬಲಾ ಕುಣಿತ ನಡೆದಿದೆ
ಅಲಾವಿ ಕುಣಿಯಸುತ್ತಾ ಕೊದಲೆಳೆಯ ಜೀವ ಸೀಳಿ ಹೋಗುತ್ತಿದೆ
ಕರ್ಬಲಾವೆಂದರೆ ಸಾಕು ಉತ್ತತ್ತಿಗಿಡವೂ ನೆತ್ತರು ಚಿಮ್ಮುತ್ತದೆ

ಗಾಳಿ ಉಸಿರುಕಟ್ಟಿ ಒದ್ದಾಡುತ್ತದೆ ಹೊಳೆಬತ್ತಿ ಬಾಯಾರುತ್ತದೆ
ಬೆಂಕಿ ಚಳಿಯಾಗಿ ನಡುಗುತ್ತದೆ ಗುಡ್ಡ ನೆಲ ಕುಸಿಯುತ್ತದೆ
ಆಕಾಶ ಹರಿದು ಬೀಳುತ್ತದೆ.

ನದಿ ಬಂದು ಮಾಡಿ ಲಡಾಯಿ ಮಾಡಿದ ಏಜೀದರೆ ಅಥವಾ ಖಲೀಫರೆ
ಮೋಡಗಳು ಹೋಗಿವೆ ನೀರು ತುಂಬಿಕೊಂಡು ಬರಲು
ಮಳೆಯಿಲ್ಲದ ಊರಿಗೆ.

ಮಣ್ಣಿನ ಗೊಂಬೆ ಮಾಡಿ ಜೀವ ಊದಿದವನೇ ಶರಣು ಎನ್ನುವೆ
ಪಾಪದ ಮನೆಯ ಸಿಂಹಾಸನ ಉರಿಯುತಿದೆ ನೀತಿ ಇಲ್ಲದೆ
ನಾಕು ಹನಿ ಕಣ್ಣೀರಾದರೂ ಸುರಿಸು, ನರಕದ ಬೆಂಕಿ ಆರಿಹೋಗಲಿ

**ಒಂದು ಮಾತು:** ಖಲೀಫನಾಗಲು ಬಯಸಿ ಕರ್ಬಲಾ ಎಂಬಲ್ಲಿ ಕೊನೆಯ ಪ್ರವಾದಿಯ ಮೊಮ್ಮಕ್ಕಳಾದ ಹಸೇನ್-ಹುಸೇನ್‌ರ ವಿರುದ್ಧ ಬಂಡಾಯ ಹೂಡಿದ ಷಿಯಾ ಪಂಥೀಯ ಮಾಂಡಲಿಕ ಏಜೀದ್. ಫರಾತ್ ನದಿಯ ಹರಿವನ್ನು ನಿಲ್ಲಿಸಿದ ಇವನು ಆ ಜಿಹಾದ್ ಹೆಸರಿನ ಕದನದಲ್ಲಿ ವಿಜಯೋತ್ಸವ ಆಚರಿಸುವಾಗ ಸುನ್ನಿ ಮುಖಂಡರ ತಲೆಗಳನ್ನು ಕಡಿದು ಕೋಲಿಗೆ ಸಿಕ್ಕಿಸಿ ಕುಣಿದಿದ್ದನಂತೆ; ಅದೇ ಕರ್ಬಲಾ ಕುಣಿತ.

◆ ಆರೀಫ ರಾಜ
ಪೋ. ಅರಕೇರಾ - ೫೮೪ ೧೧೧, ದೇವದುರ್ಗ ತಾಲೂಕು, ರಾಯಚೂರು ಜಿಲ್ಲೆ



# ಮಸ್‌ಜೀದಿನ ಬೀದಿಯಲ್ಲಿ...

ಮಸ್‌ಜೀದಿನ ಬೀದಿಯಲ್ಲಿ
ಅಲ್ಲಾಹು ಇರುವ ಜಾಗದಲ್ಲಿ
ಸೂಳೆಯೂ ಇದ್ದಳು;

ಬೆಳ್ಳಂಬೆಳಿಗ್ಗೆಯೇ
ಅಲ್ಲಾಹುವಿನ ಕೂಗು ಕೇಳಿಸಿದ ಮೇಲೆ
ಎದ್ದು ಕುಳಿತು ನಮಾಜು ಮಾಡಿ
ಗಿರಾಕಿ ಕಾಯುತ್ತಿದ್ದಳು.

ಪ್ರತಿದಿನವೂ, ದಿನದ ಐದು ಹೊತ್ತೂ
ನಮಾಜಿಗೆ ಹೋಗಿ ಬರುವ ಹುಡುಗ
ಇತ್ತಿತ್ತಲಾಗಿ ಮಸ್‌ಜೀದಿನಲ್ಲಿ ಕಾಣುತ್ತಿಲ್ಲ;
ಈ ದಿನ ಶುಕ್ರವಾರ ಬರಬಹುದು,
ಇವತ್ತು ರಮ್ಜಾನಿನ ಪವಿತ್ರ ಹಬ್ಬ ಹುಡುಗ
ಕಾಣಬಹುದು, ಬಕ್ರೀದು ಬಂತು ಸಿಗಬಹುದು;
ದಾರಿ ನೋಡುತ್ತಲೇ ಇತ್ತು ಮಸ್‌ಜೀದು.

ಹುಡುಗ ಸೂಳೆ ಮನೆಯಲ್ಲಿ ಖೈದು!

ಹುಡುಗನ ಸಂಗ ಅಂಗಾತಬಿದ್ದ ಅವಳು
ಯೋಚಿಸಿದಳು; ಅಲ್ಲಾಹು ದಾರಿತೋರಿದಂತಾಗಿ
ಬೆತ್ತಲು ಮೈಗೆ ಬಟ್ಟೆ ಹೊದ್ದಳು
ಗಿರಾಕಿಯ ದಾರಿಬಿಟ್ಟು ಗರತಿ ಪಟ್ಟ ಹೊದ್ದಳು.

ಅದೆಲ್ಲೊ ಕಾಣದಂತೆ ಕುಳಿತಿದ್ದ
ಅಲ್ಲಾಹು ಮುಗುಳ್ನಕ್ಕ...

ನಮಾಜಿಗೆ ಬರಬಹುದೆಂದು ಕಾದವರಿಗೆ
ಹುಡುಗ ಮತ್ತೊಂದು ಸೂಳೆಸಂಗ ಸಿಕ್ಕ!

◆ ಶಿ.ಜು. ಪಾಶ

೩ನೇ ತಿರುವು ಕೆರೆ ಅಂಗಳ, ಮಿಳಘಟ್ಟ ಶಿವಮೊಗ್ಗ -೫೭೭ ೨೦೧



# ಕಳಚಿದ ಕೊಂಡಿ

ಕಡಲ ದಡದ
ಮರಳ ರಾಶಿಯ ಮುಂದೆ ನಿಂತಾಗ
ಮನುಷ್ಯರಿಗೇನೆಲ್ಲ ಕನಸುಗಳು ಮೂಡುತ್ತವೆ;
ಮರಳಲ್ಲಿ ಕಟ್ಟುತ್ತಾರೆ
ತಮಗೊಂದು ಪುಟ್ಟಮನೆ
ಮನೆಗೊಂದು ಹೂದೋಟ
ತೋಟದ ದಡದಲ್ಲಿ ಹರಿಯುವ ಹೊಳೆ
ಹಿಂಬದಿಯಲಿ ಆಕಾಶದೆತ್ತರ ನಿಂತ ಹಿಮಾಲಯ

ಮರಳಿಗೆ ಅಷ್ಟು ಹೊಳಪಿಲ್ಲ
ಕಟ್ಟಿದಷ್ಟೇ ಸಲೀಸಾಗಿ ಇಳಿಯುವುದು ತಳಕ್ಕೆ
ಅವರು
ತಾವಿಲ್ಲದ ವೇಳೆ ಬಂದು ಯಾರೋ ತುಳಿವ ಭಯಕ್ಕೆ
ತಾವೇ ಕಟ್ಟಿದ ಎಲ್ಲವ ತಾವೇ ತುಳಿದು ಹಾಕುತ್ತಾರೆ



ಹಿಂತಿರುಗುವಾಗ
ಮರೆಯದೆ, ಉಕ್ಕುವ ಕಡಲ ನೋಡುತ್ತಾರೆ
ಬಿಡಿ ಬಿಡಿ ಮರಳು
ಕಡಲಷ್ಟು ಪರಿಪೂರ್ಣವಲ್ಲ

ಮನುಷ್ಯ ದೈವವಾಗುವ ಕೊಂಡಿ
ಕಳಚಿದ್ದು ಇಲ್ಲಿಂದಲೇ...

◆ ಆರ್. ಸುಧೀಂದ್ರ ಕುಮಾರ್

೪ನೇ ಸೆಮಿಸ್ಟರ್, ಕನ್ನಡ ಎಂ.ಎ., ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು - ೫೭೦ ೦೦೬



# ಕಣ್ಣಾವಲು

ಕಣ್ಣ ರೆಪ್ಪೆಯ ಹಾಗೆ
ಹಣ್ಣ ಸಿಪ್ಪೆಯ ಹಾಗೆ
ವಜ್ರಕೋಟೆಯ ಕಟ್ಟಿ ಕಾವಲಿರಿಸಿ
ಕಾಪಾಡಿದ ನನ್ನ ಅರಗಿಣಿ ನೀನು

ಮಾಟಗಾರನ ಕರೆಸಿ
ಮಾಯದೂರಿಂದ,
ಮಾಯಕದ ನಿನ್ನ
ಮೈಮಾಟವನು ನಿಲ್ಲಿಸಿದ್ದೆ!

ಕತ್ತಿಯಂತಹ ನಿನ್ನ
ಕಣ್ಣೋಟದ ಹರಿತಕ್ಕೆ
ನನ್ನೆದೆಯ ನೆತ್ತರ ಗಾವು ನೀಡಿದ್ದೆ!

ನೀನು ಮಲಗುವ
ಮಂಚಕ್ಕೂ ಕೂಡ
ನಿನ್ನ ಮೈಯ್ಯ ಬೆವರಿನ
ಸುಖ ಸಿಗದಿರಲೆಂದು
ಲಾವಂಚದ ಅಂಚು ಕಟ್ಟಿದ್ದೆ
ಕಾಟೇರಿಯಿಂದ ಕಾಡಿಗೆಯ ತಂದು
ನಿನ್ನ ಕಾಲ ಬೆರಳಿಗೆ ಸವರಿದ್ದೆ!

ಕಾಟೇರಿ-ಕರಿಮಾರಿಯರ
ಉರಿಗಣ್ಣ ಕೋಪ
ನಿನ್ನ ಚಂದಕ್ಕೆ ಶಾಪವಾಗದಿರಲೆಂದು
ಕೋಣ-ಕುರಿ ಕೋಳಿಗಳ
ಔತಣವಿಕ್ಕಿ, ಚೌಡಿ, ಚಂಡಿ, ಚಾಂಡಾಳಿಯರ
ಭೂತ ನೃತ್ಯವ ನೀಡಿದ್ದೆ!

೨

ಯಾವ ಮಾಯದ ಭೂತ
ಆಯ ತಪ್ಪಿದ ವೇಳೆ
ನಿನ್ನ ನುಂಗಿ ನೀರು ಕುಡಿದಿತ್ತೋ ಕಾಣೆ!

ಏಳು ಸುತ್ತಿನ ಕೋಟೆ
ಅಲ್ಲೊಂದು ಕೊಪ್ಪರಿಗೆ
ತುಂಬು ತಿಂಗಳಿನಲ್ಲಿ
ಹಾವಾಗಿ ಕಾದಿರುವೆ
ಗೆಳತಿ
ಅಲ್ಲಿ ನೀನೊಂದು
ಮುತ್ತಾಗಿ ಅಡಗಿರಬಹುದೆಂದು!

◆ ಯಲ್ಲಪ್ಪ .ಟಿ.

ನಂ. ೩೮, ಎ. ನಾರಾಯಣಪುರ, ದೂರವಾಣಿ ನಗರ ಅಂಚೆ, ಬೆಂಗಳೂರು - ೫೬೦ ೦೧೬



# ಹುಲ್ಲಿನ ಬೀಜಗಳು



ಓ ದೇವರೇ
ಎಲ್ಲರ ಚರ್ಮವನ್ನು ಕಪ್ಪಗೆ ಮಾಡು
ಕಣ್ಣುಗಳನ್ನು ಬಿಳಿಯಾಗಿಸು
ಎಲ್ಲರ ಕಾಲುಗಳನ್ನು ಕುಂಟುಮಾಡು
ಮತ್ತು ನೀಡು ಎಲ್ಲರಿಗೂ ಆಸರೆಗಾಗಿ ಕೋಲುಗಳನ್ನು

ಎಲ್ಲರ ಆಸೆಗಳನ್ನು ಚೂರುಚೂರು ಮಾಡು
ಕನಸುಗಳನ್ನು ಸುಟ್ಟುಬಿಡು
ಮತ್ತು ಎಲ್ಲರ ಮನೆಯ ಮುಂದೆ
ಒಂದು ಮಲ್ಲಿಗೆಯ ಗಿಡ ಮಾತ್ರ ಚಿಗುರಿಸು

ನಮ್ಮೆಲ್ಲರ ಬದುಕಿನ ನಾವೆಯ
ಹಗ್ಗವ ಬಿಚ್ಚಿಬಿಡು ಹುಚ್ಚು ಪ್ರವಾಹ ಹೆಚ್ಚಿಸು
ದೂರದಲ್ಲೊಂದು ದೀಪ ನಿರ್ಮಿಸು ಅಲ್ಲಿ
ತಿನ್ನಲೊಂದಿಷ್ಟು ಹುಲ್ಲಿನ ಬೀಜಗಳನ್ನು ನೆಡು.

◆ ರವಿ ಹಂಪಿ

ಶಿಕ್ಷಕರು, ಸಾ|| ಅಂ|| ಅರಕೇರ, ತಾ|| ದೇವದುರ್ಗ
ಜಿ|| ರಾಯಚೂರು - ೫೮೪ ೧೧೧



# ನಮ್ಮವ್ವ ಮಲಗಿದ್ದಾಳೆ

ಶ್! ನಮ್ಮವ್ವ ಮಲಗಿದ್ದಾಳೆ, ಸದ್ದು ಮಾಡಬೇಡಿ, ಸುಮ್ಮನಿರಿ
ಬಳಲಿ, ಬೆಂಡಾಗಿ, ಬಿಳಿ ಚಾದರ ಹೊದ್ದು ಮಲಗಿದ್ದಾಳೆ ಸುಮ್ಮನಿರಿ

ಒಲೆ ಊದಿ, ಊದಿ ಕಣ್ಣು ಕೆಂಪಾಗಿ,
ಹೊಗೆ ಹತ್ತಿ ಕೆಮ್ಮಿ ಕೆಮ್ಮಿ ಕೆನರಿ
ಕಂಗಾಲಾದರೂ, ನೆಲಗುಡಿಸಿ, ಸಾರಿಸಿ, ವರೆಸಿ,
ಸೋತು ಮಲಗಿದ್ದಾಳೆ ಸುಮ್ಮನಿರಿ

ರೊಟ್ಟಿಯಷ್ಟೇ ಕೈಯನ್ನೂ ಸುಟ್ಟುಕೊಂಡು,
ಅನ್ನಕ್ಕಿಂತ ಹದವಾಗಿ ತಾನು ಬೆಂದು
ಸೌದೆಯೇ ತಾನಾಗಿ ಒಲೆ ಉರಿಸಿ, ಬೇಯಿಸಿ,
ಬಿಡಿಸಿ, ಉಣಿಸಿ ಮಲಗಿದ್ದಾಳೆ ಸುಮ್ಮನಿರಿ

ಒಡೆದ ಕನ್ನಡಿಯೆದುರು ನಿಂತು,
ಎಣ್ಣೆಗಾಣದ ಕೂದಲ ಸಿಕ್ಕುಗಳ ಸಿಗಿದು, ಕಿತ್ತು ಬಂದ
ಕೂದಲ ಗುತ್ತಿಗಳ ಉಂಡೆಕಟ್ಟಿ,
ಸೂರಿನ ಬಿದಿರುಗಳ ಸಂದುಗಳಲ್ಲಿ ತುರುಕಿ ಸುಮ್ಮನೆ ಮಲಗಿದ್ದಾಳೆ ಸುಮ್ಮನಿರಿ

ಬಡತನದ ಸಿರಿಯಲ್ಲೇ ಮರೆದು, ಹರಿದ ಸೆರಗಿಗೆ
ನೂರೆಂಟು ಗಂಟುಗಳ ಬಿಗಿದು
ತನ್ನ ಮನೆ-ಮಕ್ಕಳಿಗಾಗಿ, ತವರು-ತನ್ನವರನ್ನೆಲ್ಲಾ
ಮರೆತು ಮಲಗಿದ್ದಾಳೆ ಸುಮ್ಮನಿರಿ

ದುಡಿದು, ದಣಿದು, ಬೆವರಿ ಆ ಘಾಟನ್ನೇ ಹೊದ್ದು
ಧರೆಯ ಧಾರೆಯಾಗಿ
ನಮ್ಮ ಕನಸುಗಳ ಪೋಷಿಸಿ ಹುಲುಸಾಗಿ ಬೆಳೆಸುವ ಸಲುವಾಗಿ ಹರಿದು ಬತ್ತಿದ್ದಾಳೆ ಸುಮ್ಮನಿರಿ

ತನ್ನ ಇಡೀ ಬದುಕನ್ನೇ ತೇದು, ತ್ಯಾಗ ಮಾಡಿದ ಅವಳಿಗೆ ಕ್ಷಣವಾದರೂ ಶಾಂತಿ ನೀಡಿ
ಕೃತಜ್ಞತೆಯಿಂದ ಕೈಮುಗಿಯಬೇಕಿದೆ ಸುಮ್ಮನಿರಿ,

ನಮ್ಮವ್ವ ಮಲಗಿದ್ದಾಳೆ ಸುಮ್ಮನಿರಿ.



ಈ ಕವಿತೆಯನ್ನು ಜಗದ ಎಲ್ಲ ತಾಯಂದಿರಿಗೆ ಅರ್ಪಿಸುತ್ತೇನೆ.
ಕ್ಷಮಿಸು ದೇವ, ನಿನಗೂ ಮೊದಲು ಎಲ್ಲ ತಾಯಂದಿರಿಗೆ ವಂದಿಸುತ್ತೇನೆ.

◆ ನವಾಬ್ ಬೇಲೂರು

ಬಾಪೂಜಿ ಶಾಲೆ, ಹೊಳೆ ಬೀದಿ, ಬೇಲೂರು – ೫೭೩ ೧೧೫, ಹಾಸನ ಜಿಲ್ಲೆ



# ಕೋಟೆ ಮತ್ತು ಮುದುಕ

ಸೋಲಿಲ್ಲದ ಆತ್ಮಗಳ
ಆ ದರಿದ್ರ ಕೋಟೆಯ ಎದುರು
ಯಾವಾಗಲೂ ಒಬ್ಬ ಮುದುಕ ನಿಂತಿರುತ್ತಾನೆ
ನಕ್ಷತ್ರಗಳ ಎಣಿಸಿ ಸೋತು ಸುಸ್ತಾದಂತೆ
ಕಾಣುವ ಅವನ ಕಣ್ಣುಗಳು
ಸಾವಿರ ಕತೆಗಳ ಹೇಳಲು
ಯಾರನ್ನೋ ಹುಡುಕುತ್ತಿವೆ.

ಅವನಾದರೋ ಅಲ್ಲಿ ಹಾದುಹೋಗುವ
ಹೆಂಗಸರನ್ನೆಲ್ಲ
ಒಮ್ಮೆಗೇ ತಿಂದು ಹಾಕುವವನಂತೆ
ನೋಡುತ್ತಾನೆ.

ಕಳ್ಳಿಗಿಡದ ಹೂವಿಡಿದು ಅದೃಷ್ಟದ ಮಾತಾಡುತ್ತಾನೆ
ಕತ್ತಲಾದರೆ ಮಾಯವಾಗುವ ಅವನು
ಹಾದರದ ಅಡ್ಡೆಗಳಲ್ಲಿ ಕಾಣಸಿಗುವುದಿಲ್ಲ

ಆ ಕೋಟೆಯ ಸುತ್ತಲೂ
ಇವನೇ ಹರಿಯಬಿಟ್ಟ ಭೀತಿಯ
ಕತೆಗಳು ಗಿರಕಿ ಹೊಡೆಯುತ್ತಿವೆ.











ಪುಟ್ಟ ಲಾಂದ್ರದ ಬೆಳಕಲ್ಲಿ ಆಗೀಗ
ಕೋಟೆಯ ಕದ ತೆರೆಯುವ ಮುದುಕ
ಅಲ್ಲಿ ರಕ್ತ ಜೀವವಿಲ್ಲದೆ
ಬಿದ್ದಿರುವ ಹೆಣಗಳ ನೋಡುತ್ತಾ
ತನ್ನ ಮೀಸೆ ನೀವಿಕೊಳ್ಳುತ್ತಾನೆ.

ಈಚೆಗೆ ಅವನು
ಯಾರನ್ನೋ ನೆನೆದು ರೋಧಿಸುತ್ತಿದ್ದಾನೆ
ಹೆಣದಂತೆ ಬಿದ್ದಿರುವ ಅವನಿಗೆ
ಸಿಡಿಲು ಬಡಿದಿರಬೇಕು
ಅವನ ದಿವ್ಯ ಮೌನ
ಕೋಟೆಯೊಳಗಿನ ಹೆಣಗಳಿಗೆ ಜೀವ ತರಿಸುತ್ತಿದೆ...

◆ **ಕೆ.ಎಲ್. ಚಂದ್ರಶೇಖರ್ ಐಜೂರ್**

೨ನೇ ಎಲ್.ಎಲ್.ಎಂ. ವಿದ್ಯಾರ್ಥಿ, ಯೂನಿವರ್ಸಿಟಿ ಲಾ ಕಾಲೇಜು
ಆಡಳಿತ ಕಟ್ಟಡದ ಹಿಂಭಾಗ, ಜ್ಞಾನಭಾರತಿ, ಬೆಂಗಳೂರು - ೫೬೦ ೦೫೬



# ರೂಹು

ಬಣ್ಣ ಬಣ್ಣದ ಮುಗಿಲ ಮೈತುಂಬ
ಹೂವರಳಿದ ಸಿರಿಸಂಜೆ ಪೋಡದಂಚಿಗೆ
ಜರಿಯ ಅಂಚು ಮೆದು ಮಲ್ಲಿಗೆ
ಅಂಗಳದ ಮೂಲೆಯಲಿ ಸೂಸಿದ ಕಂಪು
ನೀನು ಪ್ರತಿಫಲಿಸಿದ ನನ್ನೆದೆ ಕನ್ನಡಿ.

ಸಿರಿಮುಗಿಲ ರಂಗವಲ್ಲಿ ಸ್ಪಂದನಕೆ
ಮೊಗ್ಗಾಗಿ ತಿಳಿಗಾಳಿ ತೀಡಿ ಕೈಯಿಂದ
ಮನಸ್ಸಿಗೆ ತೇಲಿದ ಗಾಳಿಪಟ ಅಲ್ಲಿ
ಬಂಗಾರದ ಗೌರಿಶಂಕರ ಶಿಖರ ಕವಿತೆ
ಭಾವದ ಪಣತಿಯಲ್ಲಿ ಉರಿವ ಬತ್ತಿ.

ಹೊನ್ನ ಮುಡಿಯಲಿ ಸೇವಂತಿಗೆ ಜಾಜಿ
ದಿಕ್ಕುದಿಕ್ಕಿಗೆ ಕಸ್ತೂರಿ ಚಂದನ ಸೂಸಿ
ನೊರೆತೆರೆಗಳು ಏರಿದ ಕಡಲು ಒಡಲಲಿ
ಉಯ್ಯಾಲೆ ಜೀಕುವ ಹಾಯಿದೋಣಿ
ಹುಟ್ಟು ಹಾಕಿದ ಹೊಸ ಬಗೆಯ ಬಂಧ.

ನನ್ನೊಳಗೆ ನಿನ್ನೊಳಗೆ ಇರುವ ಬಾನು
ಭುವಿ ಬಯಲು ಆಲಯ ಸಪ್ತಾಂತರಾಳ
ಬೇರು ಇಳಿದ ಹರವಿನಲಿ ಟೊಂಗೆ ಚಾಚಿದ
ದಿಗಂತ ಕತ್ತಲಾಯಿತು ಬೆಳಕಾಯಿತು
ಬೀಜದಲಿ ರೂಹುಗೊಂಡ ಅಖಂಡ ಸಂಸಾರ ಸಂಬಂಧ.

◆ ಕಸ್ತೂರಿ ಬಾಯರಿ

'ಕಾತ್ಯಾಯಿನಿ', ಚಾಲುಕ್ಯನಗರ, ಬಾದಾಮಿ - ೫೮೭ ೨೦೧, ಬಾಗಲಕೋಟೆ ಜಿಲ್ಲೆ



# ಸಂಕಿರಣ 8

**ಬ**ದುಕು-ಬರಹ ಎರಡನ್ನೂ ಬಹಳ ತೀವ್ರವಾಗಿ ಅನುಭವಿಸಿ ಬರೆಯುವ ಲೇಖಕಿ **ಪ್ರತಿಭಾ ನಂದಕುಮಾರ್** (೧೯೫೫). ಎಂಭತ್ತರ ದಶಕದ ಕನ್ನಡದ ಮಹಿಳಾ ಸಾಹಿತ್ಯದ ಪ್ರಮುಖವಾದ ಹಾಗೂ ಭಿನ್ನವಾದ ಬರವಣಿಗೆಯ ರೀತಿ ಅವರದ್ದು. ಬೆಂಗಳೂರಿನ ಬಿಎಂಎಸ್, ನ್ಯಾಷನಲ್ ಕಾಲೇಜುಗಳಲ್ಲಿ ಆರಂಭಿಕ ಶಿಕ್ಷಣ ಪಡೆದ ಪ್ರತಿಭಾ ಮದ್ರಾಸ್ ವಿಶ್ವವಿದ್ಯಾಲಯದಿಂದ ಎಂ.ಎ. ಎಂಫಿಲ್ ಪಡೆದರು. ಹೊಸಗನ್ನದ ಸಾಹಿತ್ಯದ ಆರಂಭ ಕಾಲದ ಬಗ್ಗೆ ಹಾಗೂ ದ್ರಾವಿಡ ಭಾಷಾ ಶಾಸ್ತ್ರದ ತೌಲನಿಕ ಅಧ್ಯಯನವನ್ನೂ ವಿಶೇಷವಾಗಿ ಮಾಡಿದ್ದಾರೆ. ಕಾವ್ಯರಚನೆಯ ಜೊತೆಗೆ ರುಚಿಯಾದ ಅಡುಗೆ, ಕೊಲಾಜ್ ಹಾಗೂ ಟೆರ್ರಾಕೋಟಾದ ಕಲಾಕೃತಿಗಳ ರಚನೆ ಪ್ರತಿಭಾ ಖಾಸಗಿ ಹವ್ಯಾಸ.

ಪತ್ರಿಕೋದ್ಯಮದ ಜೊತೆಗೆ ನಿರಂತರವಾದ ಒಡನಾಟದ ಅನುಭವವಿರುವ ಪ್ರತಿಭಾ ಅನೇಕ ಪತ್ರಿಕೆಗಳಿಗೆ ಕೆಲಸ ಮಾಡಿದ್ದಾರೆ. ಅಂಕಣ ಬರೆದಿದ್ದಾರೆ. ಸದ್ಯ ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಹಿರಿಯ ಉಪಸಂಪಾದಕರು. ೧೯೭೯ರಲ್ಲಿ ಪ್ರಜಾವಾಣಿಯಲ್ಲಿ 'ನಾವು ಹುಡುಗಿಯರೇ ಹೀಗೆ' ಎಂಬ ಭಿನ್ನ ಜಾಡಿನ ಕವಿತೆ ಪ್ರಕಟಿಸುವ ಮೂಲಕ ಗಮನ ಸೆಳೆದ ಪ್ರತಿಭಾ ಅವರದ್ದು ನಿರಂತರವಾದ ತೀವ್ರ ಕಾವ್ಯಾಭಿವ್ಯಕ್ತಿಯ ಯಾನ.

*ನಾವು ಹುಡುಗಿಯರೇ ಹೀಗೆ(೧೯೮೩), ಈ ತನಕ (೧೯೮೮), ರಸ್ತೆಯಂಚಿನ ಗಾಡಿ (೧೯೯೧), ಕವಡೆಯಾಟ(೧೯೯೮), ಆಹಾ! ಪುರುಷಾಕಾರಂ(೨೦೦೫), ಅವರು ಪುರಾವೆಗಳನ್ನು ಕೇಳುತ್ತಾರೆ (೨೦೦೬), 'ಮುನ್ನುಡಿ ಬೆನ್ನುಡಿಗಳ ನಡುವೆ'* ಇವರ ಸದ್ಯದ ಸಮಗ್ರ ಕವಿತೆಗಳ ಸಂಕಲನ. ಇವರ ಆತ್ಮಕತೆ 'ಅನುದಿನದ ಅಂತರಗಂಗೆ' ಪ್ರಕಟಗೊಳ್ಳಲಿದೆ.

ಪ್ರತಿಭಾ ಪಡೆದ ಪ್ರಶಸ್ತಿಗಳೂ ಅನೇಕ; ಮುದ್ದಣ ಕಾವ್ಯ ಪ್ರಶಸ್ತಿ, ಶಿವರಾಮ ಕಾರಂತ ಪ್ರಶಸ್ತಿ, ಪುತಿನ ಕಾವ್ಯ ಪ್ರಶಸ್ತಿ, ಬಿ.ಹೆಚ್. ಶ್ರೀಧರ ಕಾವ್ಯ ಪ್ರಶಸ್ತಿ, ಗೌರೀಶ ಕಾಯ್ಕಿಣಿ ಪ್ರಶಸ್ತಿ, ಮಹಾದೇವಿ ವರ್ಮ ಕಾವ್ಯ ಸಮ್ಮಾನ ಹಾಗೂ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

ಅನುವಾದ, ನಾಟಕ, ಟೀವಿ ಸಾಕ್ಷ್ಯಚಿತ್ರ ತಯಾರಿಕೆ, ಪ್ರವಾಸ ಕಥನ ಹೀಗೆ ಬಹುಮುಖ ಆಸಕ್ತಿಯುಳ್ಳ ಪ್ರತಿಭಾ ಕನ್ನಡದ ಜೊತೆಜೊತೆಗೆ ಇಂಗ್ಲಿಷ್‌ನಲ್ಲೂ ಕಾವ್ಯ ರಚನೆ ಮಾಡಿದ್ದಾರೆ. ಕನ್ನಡದ ಅವರ ಕಾವ್ಯದ ಬಗ್ಗೆ ಹೆಚ್ಚು ಗಂಭೀರವಾದ ಚರ್ಚೆಗಳು ಈ ತನಕ ನಡೆದಿಲ್ಲ. ಅನೇಕ ಭಾರತೀಯ ಭಾಷೆಗಳಷ್ಟೇ ಅಲ್ಲದೆ, ಫ್ರೆಂಚ್, ಜರ್ಮನ್, ಚೀನಿ, ಫಿನ್ನಿಷ್ ಭಾಷೆಗಳಲ್ಲೂ ಪ್ರತಿಭಾ ಕವಿತೆಗಳು ಅನುವಾದಗೊಂಡಿವೆ. ದೇಶ ಭಾಷೆಗಳ ಗಡಿ ಮೀರಿದ ಕಾವ್ಯಾಭಿಮಾನಿಗಳು ಪ್ರತಿಭಾ ಅವರ ಕಾವ್ಯಕ್ಕಿದ್ದಾರೆ. ಈ ಸಂಕಿರಣ ಪ್ರತಿಭಾ ಕಾವ್ಯಕ್ಕೊಂದು ಪ್ರವೇಶಿಕೆಯಾಗಬಲ್ಲುದು.

# ತಾತ್ವಿಕ ನೆಲೆಯ ಹುಡುಕಾಟದಲ್ಲಿ




◆ ಎಂ.ಎಸ್. ಆಶಾದೇವಿ

ಎಲ್ಲ ಪ್ರಮುಖ ಕವಿಗಳ ಮಟ್ಟಿಗೂ ಇದು ನಿಜ. ಅವರ ಬರವಣಿಗೆಯ ಅವಸ್ಥಾಂತರಗಳನ್ನು ಗುರುತಿಸಿ ಚರ್ಚಿಸುವ ಗ್ರಹಿಕೆಯ ಓದಿನ ದಾರಿಗಳೂ ನಿರಂತರವಾಗಿ ಶೋಧಿತ ವಾಗುತ್ತಿರುತ್ತವೆ. ಮರುಪರಿಶೀಲನೆಗೆ ಒಳಗಾಗುತ್ತಿರುತ್ತವೆ. ಆದರೆ ಪ್ರತಿಭಾ ನಂದಕುಮಾರ್ ಕಾವ್ಯದ ಮಟ್ಟಿಗೆ ಇದು ಯಾವುದೂ ನಡೆದಿಲ್ಲ. ಅದಕ್ಕೆ ಕಾರಣಗಳು ಹಲವು. ಪ್ರತಿಭಾ ಅವರನ್ನು ಕನ್ನಡದ ಮುಖ್ಯ ಕವಿಯೆಂದು ಒಪ್ಪಿಕೊಳ್ಳುತ್ತಿರುವುದೇ ಇತ್ತೀಚೆಗೆ ಮತ್ತು ಲೇಖಕಿಯರನ್ನು ಹೀಗೆ ಅವಸ್ಥಾಂತರಗಳಲ್ಲಿ ಗುರುತಿಸುವ ಸಮಾನಾಂತರ ಪ್ರಕ್ರಿಯೆಯು ನಮ್ಮಲ್ಲಿನ್ನೂ 'ವಾಡಿಕೆಯ ಧರ್ಮ'ವಾಗಿಲ್ಲ. ಆದ್ದರಿಂದಲೇ ಪ್ರತಿಭಾ ಕಾವ್ಯದ ಬಗ್ಗೆ ಬರೆಯುವುದು ಒಂದು ಸವಾಲಾಗಿರುವಂತೆಯೇ ಕರ್ತವ್ಯ ಚ್ಯುತಿಯ ನಿವಾರಣೆಯೂ ಆಗಿದೆ.

ಈ ಹಿನ್ನೆಲೆಯಲ್ಲಿ ಪ್ರತಿಭಾ ಕಾವ್ಯದ ವೈಶಿಷ್ಟ್ಯ ಮತ್ತು ಮಹತ್ವವೇನು? ಸಾಧನೆ ಏನು ಎನ್ನುವ ಪ್ರಶ್ನೆಗಳಿಗೆ ಉತ್ತರಗಳು ಸುಲಭವಲ್ಲ.

ಇತ್ತೀಚೆಗೆ ಪ್ರತಿಭಾ ಕಾವ್ಯವನ್ನು ಕುರಿತಂತೆ ಎರಡು ಮುಖ್ಯ ಲೇಖನಗಳು ಪ್ರಕಟವಾಗಿವೆ. ಪ್ರೊ. ಎಚ್.ಎಸ್. ರಾಘವೇಂದ್ರರಾವ್ ಅವರು ಬರೆದ ಪ್ರತಿಭಾ ಅವರ 'ಮುನ್ನುಡಿ ಬೆನ್ನುಡಿಗಳ ನಡುವೆ'- ಈ ತನಕದ ಸಮಗ್ರ ಕಾವ್ಯಕ್ಕೆ ಬರೆದ ಅಧ್ಯಯನಾತ್ಮಕ ಮುನ್ನುಡಿ ಹಾಗೂ ಪ್ರೊ. ಕೇಶವ ಶರ್ಮ ಈ ಕೃತಿಯನ್ನು ಕುರಿತು ಬರೆದ ವಿಮರ್ಶೆ.

ಕೇಶವಶರ್ಮರು ಹೇಳುವಂತೆ ಹಲವರನ್ನು ಬೆಚ್ಚಿಬೀಳಿಸಿದ, ಚರಿತ್ರೆಯನ್ನು ಬೇರೊಂದು ದೃಷ್ಟಿಕೋನದಿಂದ ನೋಡಲು ಪ್ರಯತ್ನಿಸಿರುವುದೇ ಪ್ರತಿಭಾ ಕಾವ್ಯದ ವೈಶಿಷ್ಟ್ಯವೇ? ಎಚ್.ಎಸ್.ಆರ್. ಅಭಿಪ್ರಾಯದಂತೆ 'ಗೌರಿ ದುಃಖದಲ್ಲಿ ಪುರುಷರ ಪಾಲನ್ನು, ಪಾತ್ರವನ್ನು ಸ್ಥಾಪಿಸುವ, ಮನದಟ್ಟು ಮಾಡಿಸುವ ಶಕ್ತಿಯೇ ಪ್ರತಿಭಾ ಕಾವ್ಯದ ಮಹತ್ವವೇ? ನಿರಂತರ ನಿರ್ಲಕ್ಷ್ಯಕ್ಕೆ ಒಳಗಾಗಿಯೂ ತನ್ನ ಪಾಡಿಗೆ ತಾನು ಕಾವ್ಯ ರಚನೆಯಲ್ಲಿ ಮುಳುಗಿಹೋದದ್ದು ಇವರ ಕಾವ್ಯದ ಸಾಧನೆಯೇ?'

ಮೇಲಿನ ಮೂರೂ ಪ್ರಮೇಯಗಳು ಮೇಲ್ನೋಟಕ್ಕೆ ಸರಳ ಹೇಳಿಕೆಗಳ ಹಾಗೆ ಕಂಡರೂ ಪ್ರತಿಭಾ ಕಾವ್ಯದ ಮೂರು ಮೂಲಭೂತವಾದ ಆಯಾಮಗಳನ್ನು ಇವು ಪ್ರತಿನಿಧಿಸುತ್ತವೆ. ಪ್ರತಿಭಾ ನಂದಕುಮಾರರ ಕಾವ್ಯ ಚರ್ಚೆಯಾಗಬೇಕಾದ ಪ್ರಧಾನ ನೆಲೆಯಾಗಿಯೇ ಇವುಗಳನ್ನು ಗುರುತಿಸಬೇಕು.

ಪೂರ್ವಗ್ರಹಪೀಡಿತರಾಗದೆಯೂ ಕನ್ನಡದ ಪ್ರಧಾನ ಧಾರೆ ವಿಮರ್ಶೆಯು ನಮ್ಮ ಮುಖ್ಯ ಲೇಖಕಿಯರನ್ನು ಚರ್ಚಿಸುವ ಸಂದರ್ಭದಲ್ಲಿ ಎದುರಿಸುತ್ತಿರುವ ತೊಡಕುಗಳನ್ನು ಕವಿತಾ ನಾಗಭೂಷಣ ಮತ್ತು ಬಾನು ಮುಷ್ತಾಕರ ಬರವಣಿಗೆಗಳನ್ನು ಕುರಿತ ನನ್ನ ಲೇಖನಗಳಲ್ಲಿ ವಿವರಿಸಿಕೊಳ್ಳುವ ಪ್ರಯತ್ನ ಮಾಡಿರುವುದರಿಂದ ಅದನ್ನು ಪುನರಾವರ್ತಿಸುವುದರಲ್ಲಿ ನನಗೆ ಆಸಕ್ತಿಯಿಲ್ಲ. ಹೊಸ ತಾತ್ವಿಕ ನೆಲೆಯೊಂದರ ಹುಡುಕಾಟದಲ್ಲಿ ಕನ್ನಡದ ಸ್ತ್ರೀವಾದಿ ಚಿಂತಕಿಯರೂ ಸೇರಿದಂತೆ ಎಲ್ಲ ಪ್ರಮುಖ ವಿಮರ್ಶಕರೂ ತೊಡಗಿಸಿಕೊಂಡಿದ್ದಾರೆ ಎನ್ನುವುದನ್ನು ಸೂಚಿಸಿ ಮುಂದುವರಿಯುತ್ತೇನೆ.

ಹಾಗೆ ನೋಡಿದರೆ ಕೇಶವ ಶರ್ಮರು ಪ್ರತಿಭಾರ ಕಾವ್ಯವನ್ನು ಅವರ ಮೂಲ ನೆಲೆಗಳಲ್ಲಿ ಹುಡುಕುವ ಪ್ರಯತ್ನ ಮಾಡಿದ್ದಾರೆ. ಅವರ ಕಾವ್ಯದ ರಾಜಕೀಯ ಸಮೀಕರಣಗಳನ್ನು (Political equations) ಕಟ್ಟಿಕೊಡುವುದೇ ಈ ಲೇಖನದ ಮುಖ್ಯ ಉದ್ದೇಶವಾಗಿರುವಂತೆ ತೋರುತ್ತದೆ. ಚರಿತ್ರೆಯನ್ನು ಬೇರೊಂದು ಕೋನದಿಂದ ಹಾಯುವ ಪ್ರಯತ್ನವನ್ನು ಇವರ ಕಾವ್ಯ ತುಂಬ ಗಾಢವಾಗಿಯೇ ಮಾಡುತ್ತದೆ ಎನ್ನುವುದು ನಿಜವಾದರೂ ಇದಕ್ಕೆ ಇನ್ನೊಂದು ಮುಖವೂ ಇದೆ. ಚರಿತ್ರೆಯನ್ನು ಪ್ರತಿಭಾ ವರ್ತಮಾನದ ಸನ್ನಿವೇಶವನ್ನು ಸ್ಪಷ್ಟಪಡಿಸಿಕೊಳ್ಳುವುದಕ್ಕಾಗಿಯೇ ಬಳಸುತ್ತಾರೆ.

ಚರಿತ್ರೆಯ ಸ್ತ್ರೀಲೋಕದ ಚಹರೆಗಳನ್ನೂ ಸಮಕಾಲೀನ ಹೆಣ್ಣಿನ ಚಹರೆಯನ್ನೂ ಮುಖಾಮುಖಿಯಾಗಿಸುವುದರಲ್ಲಿ ಇವರಿಗೆ ಅಪಾರ ಆಸಕ್ತಿಯಿದೆ. ದ್ರೌಪದಿ, ಸೀತೆಯೂ ಸೇರಿದಂತೆ ಅಕ್ಕನನ್ನು ಮತ್ತೆ ಮತ್ತೆ ಮಾತಿಗೆಳೆಯುವ ಇವರ ಪ್ರಯತ್ನದಲ್ಲಿ ಈ ಅಂಶ ಸ್ಪಷ್ಟವಾಗಿದೆ. ಈ ಮುಖಾಮುಖಿಯಲ್ಲಿನ ಫಲಿತಗಳನ್ನು ಪ್ರತಿಭಾ ಪ್ರಾಮಾಣಿಕವಾಗಿ, ದಿಟ್ಟತನದಿಂದ ನಿಸ್ಸಂಕೋಚವಾಗಿ ದಾಖಲಿಸುತ್ತಾರೆ. ವಿನ್ನಿ ಮಂಡೇಲಾ, ಕಮಲಾ ಸುರಯ್ಯಾ ಇವರನ್ನು ಕುರಿತು ಬರೆಯುವಾಗಲೂ ಪ್ರತಿಭಾ ವ್ಯಕ್ತಿಗತ ನೆಲೆಯಲ್ಲಿ ಮಾತ್ರ ಅವರನ್ನು ಶೋಧಿಸುವುದಿಲ್ಲ. ಚರಿತ್ರೆಯ ಹಿನ್ನೆಲೆ ಮತ್ತು ವರ್ತಮಾನದ ತುರ್ತು ಎರಡೂ ಇವರ ಕಾವ್ಯದಲ್ಲಿ ಹಾಸುಹೊಕ್ಕಾಗಿದೆ. ಚರಿತ್ರೆಗೂ ದಕ್ಕದ, ವರ್ತಮಾನಕ್ಕೂ ಮಿಕ್ಕಿದ ಹೆಣ್ಣಿನ ನಿಗೂಢ ಮನೋಲೋಕಗಳನ್ನು ಅನಾವರಣಗೊಳಿಸುವ ಹಂಬಲವೂ ನನಗೆ ಪ್ರತಿಭಾರ ಕಾವ್ಯದಲ್ಲಿ ಕಾಣಿಸುತ್ತದೆ. ಆದ್ದರಿಂದಲೇ ಶರ್ಮರು ಬಂಡವಾಳಶಾಹಿ ಸಂದರ್ಭದ ಹಿನ್ನೆಲೆಯಲ್ಲಿ ಪ್ರತಿಭಾ ಕಾವ್ಯವನ್ನು ಇಡುವ ಪ್ರಯತ್ನಗಳನ್ನು ನಡೆಸುವುದರ ಬಗ್ಗೆ ಅನೇಕ ಪ್ರಶ್ನೆಗಳು ಏಳುತ್ತವೆ. ಮಧ್ಯಮವರ್ಗದ ಘೋಷಿತ ಆಧುನಿಕ ಮಹಿಳಾ ಜಗತ್ತಿನ ಪ್ರತಿನಿಧಿಯಾಗಿ ಪ್ರತಿಭಾರ ಕಾವ್ಯವನ್ನು ನೋಡುವುದು ಅವರ ಕಾವ್ಯಕ್ಕೆ ಅನಗತ್ಯವಾದ ಮಿತಿಯನ್ನು ತಂದುಕೊಡುತ್ತದೆ ಎಂದೇ ನನಗನ್ನಿಸುತ್ತದೆ.

ಪ್ರತಿಭಾ ಕಾವ್ಯ ವ್ಯಕ್ತಿ ಕೇಂದ್ರಿತ ಎನ್ನುವ ಅಭಿಪ್ರಾಯಗಳೂ ಇವೆ. ಆದರೆ ಹೆಣ್ಣನ್ನು ಕುರಿತ ತಮ್ಮ ದೃಷ್ಟಿಕೋನದಲ್ಲಿಯೇ ಪ್ರತಿಭಾ ಸ್ಥಾಪಿತ ಪರಿಕಲ್ಪನೆಗಳನ್ನು, ಚಿತ್ರಗಳನ್ನು ನಿರಾಕರಿಸುತ್ತಾರೆ. 'ನಾಜೂಕಾಗಿ

ನಿಭಾಯಿಸಿ' (Handle with Care) ಅಥವಾ 'ಮಿಹಿರ ಬಿಂಬವ ಕಾಣದ ನೃಪ ಮಹಿಳೆಯರ ಚಿತ್ರಗಳನ್ನು ಪ್ರತಿಭಾ ಆರಂಭದಿಂದಲೂ ನಾಶಗೊಳಿಸುತ್ತಲೇ ಬಂದಿದ್ದಾರೆ. ಹೀಗೆ ಸ್ಥಾಪಿತ ಧೋರಣೆಗಳನ್ನು ನಾಶ ಮಾಡುವುದರ ಮೂಲಕವೇ ಪ್ರತಿಭಾ ವ್ಯಕ್ತಿ ಕೇಂದ್ರಿತ ನೆಲೆಯನ್ನು ಅನಾಯಾಸವಾಗಿ ದಾಟಿ ಸಮುದಾಯದ ಪ್ರತಿನಿಧಿಯಾಗಿ ಬಿಡುತ್ತಾರೆ. ಆದ್ದರಿಂದಲೇ ಪ್ರತಿಭಾ ಕಾವ್ಯ ವ್ಯಕ್ತಿಕೇಂದ್ರಿತ ಎಂದಾಗಲಿ, ಒಂದು ವರ್ಗದ ಪ್ರತಿನಿಧಿ ಎಂದು ವರ್ಗೀಕರಿಸುವುದಾಗಲಿ ಸಾಧ್ಯವಿಲ್ಲ.

ಎಲ್ಲ ಮುಖ್ಯ ಕವಿಗಳಲ್ಲೂ ಅವರ ಬರವಣಿಗೆಯುದ್ದಕ್ಕೂ ಬೆಳೆಯುತ್ತಲೇ ಬರುವ, ರೂಪಾಂತರಗೊಳ್ಳುವ ಕೆಲವು ವಸ್ತು ವಿಶೇಷಗಳೂ, ಸಂದರ್ಭನಿಷ್ಠವಾದ (ತಾತ್ಕಾಲಿಕ ಎಂದೂ ಕರೆಯಬಹುದಾದ) ಕೆಲವು ವಸ್ತು ವಿಶೇಷಗಳೂ ಇರುತ್ತವೆ. ಪ್ರತಿಭಾ ಕಾವ್ಯದಲ್ಲಿ ನನಗೆ ಹಾಗೆ ನಿರಂತರವಾಗಿ ಕಾಣಿಸುವ ಕೆಲವು ವಸ್ತು ವಿಶೇಷಗಳೆಂದರೆ ಹೆಣ್ಣಿನ ಬದುಕು ಮತ್ತು ವ್ಯಕ್ತಿತ್ವಗಳೆರಡನ್ನೂ ಆವರಿಸಿರುವ ಹಿಂಸೆ, ವ್ಯಕ್ತಿತ್ವದ ಹುಡುಕಾಟದಲ್ಲಿರುವ ಆಧುನಿಕ ಹೆಣ್ಣಿನ ಇಕ್ಕಟ್ಟುಗಳು ಹಾಗೂ ಈ ಹಿಂಸೆ ಮತ್ತು ಇಕ್ಕಟ್ಟುಗಳಲ್ಲಿಯೂ ಮುಕ್ಕಾಗದ ಜೀವನ ಪ್ರೀತಿ.

ಸಮಗ್ರ ಕಾವ್ಯಕ್ಕೆ ಬರೆದ ಮುನ್ನುಡಿಯಲ್ಲಿ ಎಚ್.ಎಸ್.ಆರ್. ಲಂಕೇಶರನ್ನು ಬಿಟ್ಟರೆ ಹಿಂಸೆಯ ಸಾಂದ್ರತೆಯನ್ನು ಹಿಡಿಯಲು ಪ್ರಯತ್ನಿಸುವ ಇನ್ನೊಬ್ಬ ಕವಿ ಪ್ರತಿಭಾ ಎಂದು ಹೇಳುತ್ತಾರೆ.

ಹಿಂಸೆಯ ಮೂರ್ತ-ಅಮೂರ್ತ ನೆಲೆಗಳನ್ನು ಪ್ರತಿಭಾ ಹುಡುಕುವ ಪರಿ ಕನ್ನಡ ಕಾವ್ಯದ ಮಟ್ಟಿಗೆ ಅನನ್ಯವಾಗಿಯೇ ನನಗೆ ಕಂಡಿದೆ. ಅನೂಹ್ಯವಾದ ಹಿಂಸೆಯ ಸೂಕ್ಷ್ಮ ತಾಣಗಳನ್ನು ತಲ್ಲಣಗೊಳಿಸುವ ರೀತಿಯಲ್ಲಿ ಪ್ರತಿಭಾ ಚಿತ್ರಿಸುತ್ತಾರೆ.

ಹಿಂಸೆಯ ವಿವರಗಳನ್ನು ದಾಖಲಿಸುವಾಗ ಇವರು ವಿಶೇಷವಾದ ಕ್ರಮವೊಂದನ್ನು ಅನುಸರಿಸುತ್ತಾರೆ. ಮುಂದುವರಿದ ಘಟ್ಟದಲ್ಲಿ ಈ ಕ್ರಮವು ಇವರ ಕಾವ್ಯದ ವಿಶಿಷ್ಟ ಲಕ್ಷಣವಾಗಿಯೂ ಕಾಣಿಸಿಕೊಳ್ಳುತ್ತದೆ. ಶ್ರೇಣೀಕೃತ ವ್ಯವಸ್ಥೆಯ ಕ್ರೌರ್ಯವೇ ಹೆಣ್ಣಿನ ಹಿಂಸೆಯ ಮೂಲವೆನ್ನುವ ಸತ್ಯವನ್ನು ಪ್ರತಿಭಾ ಜಡ ನಿಯಮಗಳೆಂದೋ, ಸ್ಥಾಪಿತ ದೃಷ್ಟಿಕೋನಗಳೆಂದೋ ಸಂಬೋಧಿಸುವುದಿಲ್ಲ. ಬದಲಿಗೆ ಜೀವಂತ ವ್ಯಕ್ತಿಗಳ ಉದ್ದೇಶಪೂರ್ವಕ ಕ್ರಿಯೆ-ನಡವಳಿಕೆಯೆಂದೇ ಗುರುತಿಸುತ್ತಾರೆ. ಇವರ ಕಾವ್ಯದಲ್ಲಿ ಬರುವ 'ಅವರು' ವ್ಯವಸ್ಥೆಯ ಜ್ವಲಂತ ಪ್ರತಿನಿಧಿಗಳು. 'ಅವರು' ದೂರದ ಶತ್ರುಗಳಲ್ಲ, ನಮ್ಮ ಬದುಕಿನ ಅವಿಭಾಜ್ಯ ಅಂಗವಾದವರು. 'ಅವರು' ಹೆಣ್ಣಿನ ಬದುಕಿನಲ್ಲಿ ಬೇರೆ ಬೇರೆ ಪಾತ್ರಗಳನ್ನು ವಹಿಸುತ್ತಿರುತ್ತಾರೆ. ತಂದೆಯಾಗಿ, ಗಂಡನಾಗಿ, ಮಗನಾಗಿ, ಗೆಳೆಯನಾಗಿ... ಹೀಗೆ ಹೆಣ್ಣಿನ ಬದುಕಿನ ಸಂಭ್ರಮದ ಘಳಿಗೆಗಳಿಗೆ ಕಾರಣರಾಗುವ ಇದೇ ಗಂಡಸರು ಯಾವ ಘಳಿಗೆಯಲ್ಲಿ ಬೇಕಾದರೂ 'ಅವರಾಗಿ' ಬಿಡುವ ಕ್ರೌರ್ಯವನ್ನು, ದುರಂತವನ್ನು ಬದುಕಿನ ಸಾಮಾನ್ಯ, ಕ್ಷುದ್ರ ಎಂದು ಕರೆಯಬಹುದಾದ ವಿವರಗಳ ಮೂಲಕವೇ ಪ್ರತಿಭಾ ಸಂದೇಹಾತೀತವಾಗಿ ಪ್ರತಿಪಾದಿಸುತ್ತಾರೆ.

ಈ ಘಟ್ಟದಲ್ಲಿ ಸ್ಪಷ್ಟಪಡಿಸಬೇಕಾದ, ಗುರುತಿಸಬೇಕಾದ ಎರಡು ಮುಖ್ಯವಾದ ಅಂಶಗಳಿವೆ. ಒಂದು ಈ ದುರಂತ ಕ್ರೌರ್ಯವನ್ನು ಗುರುತಿಸುವಾಗಲೂ ಅದು ಎಲ್ಲೂ ಪುರುಷ ದ್ವೇಷವಾಗಿ ಪರಿವರ್ತನೆಯಾಗುವುದಿಲ್ಲ ಮತ್ತು ಈ ಯಾವ ಸನ್ನಿವೇಶಗಳಲ್ಲೂ ಹೆಣ್ಣು ಅಸಹಾಯಕಳು ಎಂದೂ ಕಾಣಿಸುವುದಿಲ್ಲ. ಬದಲಿಗೆ ಗಂಡು ಹೆಣ್ಣನ್ನು ನಿಯಂತ್ರಿಸುವ, ಆಳುವ ಹೊಸ ದಾರಿಗಳ ಹುಡುಕಾಟದಲ್ಲಿ ಇರುವಂತೆಯೂ, ಆ ಅಧೀನ ಬದುಕಿನಿಂದ ಹೊರಬರಲು ಹೆಣ್ಣು ಧೀರೋದಾತ್ತವಾದ ಪ್ರಯತ್ನವನ್ನು ನಡೆಸುವವಳಂತೆಯೂ ಚಿತ್ರಿತವಾಗುತ್ತಾರೆ.

ಆರಂಭದಲ್ಲಿ ನಾನು ಪ್ರತಿಭಾ ಕಾವ್ಯದ ಮಜಲುಗಳನ್ನು ಪ್ರಧಾನ ಧಾರೆ ವಿಮರ್ಶೆ ಚರ್ಚಿಸಿಲ್ಲ ಎಂದು ಹೇಳಿದ ಅಂಶವನ್ನು ಇಲ್ಲಿ ಮತ್ತೆ ಚರ್ಚೆಗೆ ತೆಗೆದುಕೊಳ್ಳಬಹುದಾದರೆ, ಪ್ರತಿಭಾ ಕಾವ್ಯದ ಈ ಅಂಶಗಳನ್ನು ಕಂಡುಕೊಳ್ಳುವಲ್ಲಿನ ತೊಡಕುಗಳೇ ಅವರ ಕಾವ್ಯದ ಚರ್ಚೆಗೆ ಹಿನ್ನಡೆಯನ್ನು ತಂದಿರಬಹುದು. ವ್ಯವಸ್ಥೆಯ ಬದಲಿಗೆ, 'ಅವರನ್ನು' ಪ್ರತಿವಾದಿಯ ಸ್ಥಾನಕ್ಕೆ ತಂದು ನಿಲ್ಲಿಸಿದ ಕೂಡಲೇ ವೇದಿಕೆಯ ಸ್ವರೂಪವೇ ಬದಲಾಗಿಬಿಟ್ಟಿತು.

ಎಲ್ಲಿದ್ದೀಯೆ ನೈನಾ
ಇಲ್ಲೇ ಇದ್ದೀನಪ್ಪಾ
ಕಾಟ್ ಕಾಂಡೋಮ್ ಕ್ಯಾರಿಬ್ಯಾಗ್
ಇಲ್ಲೇ ಇವೆಯಪ್ಪಾ

ಊಟಕ್ಕೇನೇ ನೈನಾ
ರೊಟ್ಟಿ ತಂದೆಯೇನೇ
ಬೇಯ್ತಾ ಇದ್ದೀನಪ್ಪಾ
ಶರ್ಮ ತರ್ತಾನಪ್ಪಾ (ನೈನಾ ಸಾಹ್ನಿ)

ಅಪ್ಪ ಶರ್ಮನಾಗಬಹುದಾದ ಸಾಧ್ಯತೆಯನ್ನು, ಅವರಿಬ್ಬರ ನಡುವಿನ ಸಾಮ್ಯತೆಯನ್ನು ಕವನ ಅದ್ಭುತವಾಗಿ ಧ್ವನಿಸುತ್ತದೆ. ಅವಳು ರೊಟ್ಟಿಯಾಗಿ ಬೇಯುವುದರಲ್ಲಿ ಅಪ್ಪನ ಪಾಲೆಷ್ಟು? ಶರ್ಮನ ಪಾಲೆಷ್ಟು? ಅವರ ಪಾತ್ರಗಳು ಅದಲು ಬದಲಾಗುವುದಕ್ಕೆ ಎಷ್ಟು ಹೊತ್ತು ಬೇಕು?

ಆದ್ದರಿಂದಲೇ, ತಂದೆ ಎನ್ನುವ ಕೇಂದ್ರದಿಂದ, ಆ ಕೇಂದ್ರದ ಅಗೋಚರ ಹಿಡಿತದಿಂದ ಬಿಡಿಸಿಕೊಳ್ಳಬೇಕೆನ್ನುವ ತಹತಹವೂ ಇವರ ಕಾವ್ಯದಲ್ಲಿ ಪುನರುಕ್ತವಾಗಿದೆ.

ನನ್ನ ಮಗಳು ಅವಳ ತಂದೆಗೆ
ದಬಾಯಿಸಿದ ದಿನ ನಾನು ಹೋಳಿಗೆ ಮಾಡಿದೆ

ಅಥವಾ ಈ ಸಾಲುಗಳನ್ನು ನೋಡಿ...

ಯಾವ ಸುಮ್ಮಾನವಿಲ್ಲದೆ ನಲಿಯುತ್ತಾ ಕೂತಿದ್ದಾಳೆ
ಮಗಳು ಒತ್ತಿ ಸರಳು ಚಾಚಿದ ಕೊರಳು
ನನ್ನಂತೆ ಹೆದರಿ ಹಿಡಿದಿಲ್ಲ ಅಮ್ಮನ ಬೆರಳು
ಆವರಿಸಿದೆ ದೂರ ನಿಂತು ನಗುವ ತಂದೆಯ ನೆರಳು

ಪ್ರತಿಭಾ ಕಾವ್ಯದಲ್ಲಿ ಹಲವು ಸ್ತರಗಳ ಹೆಣ್ಣುಗಳಿದ್ದಾರೆ. ಮೇಲ್ನೋಟಕ್ಕೆ ಪರಸ್ಪರ ವಿರುದ್ಧವೆಂದು ಕಾಣಬಹುದಾದ ಪರಿಸರಗಳ ಹೆಣ್ಣುಗಳ ಮೆರವಣಿಗೆಯೇ ಇವರ ಕಾವ್ಯದಲ್ಲಿದೆ. ಸೀತೆ, ದ್ರೌಪದಿ, ಅಮ್ಮನ ಹಲವು ಚಿತ್ರಗಳು, ಬಾತ ಕಾಲಿನ ಮುತ್ತೈದೆ, ಕೇರ್ ಫ್ರೀ ಮಹಿಳೆಯರು... ಈ ಎಲ್ಲ ಮಹಿಳೆಯರೂ ಅವರವರ ಪರಿಸರದ ಹಿನ್ನೆಲೆಯಲ್ಲಿಯೇ ಚಿತ್ರಿತವಾಗುತ್ತಾರೆ.

ಭಿನ್ನ ಪರಿಸರದ ವ್ಯತ್ಯಾಸದಾಚೆಗೂ ಸಮಾನವಾದ 'ಹೆಣ್ಣಿನ ವ್ಯಕ್ತಿತ್ವ ವಿನ್ಯಾಸ'ವೊಂದನ್ನು, ಅದರ ಚಹರೆಗಳನ್ನು, ಆ ಚಹರೆ ರೂಪುಗೊಳ್ಳುವುದರ ಪ್ರತಿಕ್ರಿಯೆಯನ್ನು ಇವರ ಕಾವ್ಯದಲ್ಲಿ ನಾವು ಗುರುತಿಸಬಹುದು. ಕೇರ್‌ಫ್ರೀ ಮಹಿಳೆಯರು ಮತ್ತು ಗೃಹಿಣಿಗೀತ ಕವನಗಳನ್ನು ಒಟ್ಟಿಗೇ ಇಟ್ಟಾಗ ಈ ಪ್ರಯತ್ನದ ಸ್ವರೂಪ ನಮಗೆ ಸ್ಪಷ್ಟವಾಗುತ್ತದೆ.

ಮನೆ ಮಂದಿಗೆ ಎಲ್ಲಕ್ಕಿಂತ ಉತ್ತಮ ಹಲ್ಲುಪುಡಿ
ಆಂಟಿ ಘಮ್ಮೆನ್ನುವ ಸೋಪಿನಲ್ಲಿ ಮಿಂದು
ಹುಬ್ಬೇರುವ ತಾಜಾ ಪೌಡರು ಚಿಮುಕಿಸಿ
ಶೇಕಡಾ ಇಪ್ಪತ್ತು ರಿಯಾಯಿತಿ ಸೀರೆ ಉಟ್ಟವಳೇ
ಎಷ್ಟು ಕೊಟ್ಟರೇ ನಿನ್ನ ನಗೆಗೆ (ಗೃಹಿಣಿ ಗೀತ)

ಕಾಮನ ಬಿಲ್ಲಿನ ಹಿಂದೆ ಓಡುವವರಿಗೆ
ದಣಿವಿಲ್ಲ ನಿಂತಲ್ಲೇ ಸುತ್ತು ಹೊಡೆಯುತ್ತಾ
ಒಂದೇ ಮೆಟ್ಟಿಲನ್ನು ಊರಿ ಇಳಿಯುತ್ತಾ
ಸೂಪರ್ ಬಜಾರಿನ ಸಾಲುಗಳ ನಡುವೆ
ಕೇರ್ ಫ್ರೀ ಮಹಿಳೆಯರು ಕಳೆದುಹೋಗುತ್ತಾರೆ
ಇಪ್ಪತ್ತೈದು ರೂಪಾಯಿ ನೈಟಿಗಳಲ್ಲಿ
ವ್ಯಾನಿಷಿಂಗ್ ಕ್ರೀಮುಗಳಲ್ಲಿ ಮಾಯವಾಗುತ್ತಾರೆ.

ಈ ಎರಡೂ ಕವನಗಳಲ್ಲಿ ಸಮಾನ ಅಂಶಗಳನ್ನು ಗಮನಿಸಿ. 'ದುಡಿತ' ಸಮಾನವಾದ ಅಂಶ ಮತ್ತು ದುಡಿತದ ಗುರಿಯೂ ಒಂದೇ ಆಗಿದೆ. 'ಕುಟುಂಬ ಕಲ್ಯಾಣ' ನಿರ್ಣಾಯಕವಾದ ಅಂಶವೆಂದರೆ ದಣಿವಿನ ಈ ದುಡಿತ ಬದುಕಿನ ಬಗೆಗಿನ ಉತ್ಸಾಹವನ್ನು ಕುಂದಿಸುವುದಿಲ್ಲ. ಕೊನೆಯಿರದ ಈ ದಣಿವಿನ ಆಚೆಗೂ ಆಕೆ ನಗಬಲ್ಲಳು, ಕಾಮನಬಿಲ್ಲಿನ ಕನಸನ್ನು ಕಾಣಬಲ್ಲಳು. ಈ ನಗು ಮತ್ತು ಕನಸು ವಾಸ್ತವದ ಅಜ್ಞಾನದಿಂದ ಬಂದದ್ದಲ್ಲ.

ನಿನ್ನ ಜೀನ್ಸ್ ಪ್ಯಾಂಟನ್ನೊಯ್ದು
ಒಲೆಯೊಳಗಿಕ್ಕು

ಎನ್ನುವ ವಾಸ್ತವ ಪ್ರಜ್ಞೆಯಲ್ಲಿಯೇ ಈ ನಗು ಮತ್ತು ಕನಸನ್ನು ಬಾಚಿಕೊಳ್ಳಲು ಪ್ರತಿಭಾ ಬಯಸುತ್ತಾರೆ. ಪ್ರತಿಭಾ ಕಾವ್ಯದಲ್ಲಿನ ಹೆಣ್ಣಿನ ವಿನ್ಯಾಸದ, ಬಹುಮುಖ್ಯ ಚಹರೆಗಳಲ್ಲಿ ಇದೇ ಮೂಲಭೂತವಾದದ್ದು. ಪತ್ರಕರ್ತರೊಬ್ಬರು ತಮ್ಮನ್ನು 'ಫೀನಿಕ್ಸ್' ಎಂದು ಕರೆದದ್ದನ್ನು ಪ್ರತಿಭಾ ಹೇಳಿದ್ದು ನೆನಪಿಗೆ ಬರುತ್ತದೆ. ನಿಜವೆಂದರೆ, ಪ್ರತಿಭಾ ಹೆಣ್ಣನ್ನು ಚಿತ್ರಿಸಿರುವುದೇ, ಗ್ರಹಿಸಿರುವುದೇ ಈ ಫೀನಿಕ್ಸ್‌ನ ಸಾಧ್ಯತೆಯಲ್ಲಿ ಎನ್ನಿಸುತ್ತದೆ ನನಗೆ.

ಅವರ ಆರಂಭದ ಕವನಗಳಲ್ಲೊಂದಾದ 'ಬದುಕು' ಅವರ ಕಾವ್ಯದ ಮತ್ತು ಬದುಕಿನ ಧೋರಣೆಗಳೆರಡನ್ನೂ ಈ ಕವನ ಧ್ವನಿಸುತ್ತದೆ.

ಅಜ್ಜಿಬಜ್ಜಿಯರ ಬದುಕು
ಸೊಟ್ಟಸೊಟ್ಟಗೆ ಬಿದ್ದಿತ್ತು
ಚೆನ್ನಾಗಿ ತದುಕಿ ತುಳಿದು
ಒದ್ದು ಮೂಲೆಗೆಸೆದೆ
ನರಳುತ್ತಿತ್ತು

ನಾನು ಅದನ್ನು
ಅದು ನನ್ನನ್ನು
ಕಣ್ಣಕಣ್ಣು ಬಿಟ್ಟು ನೋಡಿದೆವು

ಒಮ್ಮೆಲೇ ಪ್ರೀತಿ ಉಕ್ಕಿ ಬಂದು
ಎತ್ತಿ ಊರಿ ತಟ್ಟಿದೆ
ಹಾಯೆಂದು ಮುಲುಗುಟ್ಟಿತು
ಬದುಕು

ಬದುಕನ್ನು ಕುರಿತ ಪ್ರತಿಭಾರ ನಿಲುವು ಇನ್ನೂ ಹೆಚ್ಚು ಸ್ಪಷ್ಟವಾಗುವುದು ಗಂಡು-ಹೆಣ್ಣಿನ ಸಂಬಂಧಗಳ ಪರಿಶೀಲನೆಯಲ್ಲಿ ಮತ್ತು ಲೈಂಗಿಕತೆಯನ್ನು ಕುರಿತ ಅವರ ವಿಚಾರಗಳಲ್ಲಿ.

ಬದುಕು ಕೊಡಬಹುದಾದ ಎಲ್ಲದಕ್ಕೂ ನಿರಂತರವಾಗಿ ಬೊಗಸೆಯೊಡ್ಡುವ ಕವಿ ಪ್ರತಿಭಾ. ಈ ಇತ್ಯಾತ್ಮಕ ದೃಷ್ಟಿ ಮತ್ತು ಪ್ರೀತಿಯಿಂದಲೇ ಪ್ರತಿಭಾ ಎಲ್ಲ ಸಂಬಂಧಗಳನ್ನು ಆವಾಹಿಸಿಕೊಳ್ಳುತ್ತಾರೆ. ಹೀಗಿದ್ದೂ ಅವರು ಸಂಬಂಧಗಳ ಬಗೆಗೆ ತಳೆಯುವ ನಿಲುವು ಕುತೂಹಲಕರವಾಗಿದೆ.

ಸಾರ್ಥಕ ಸಂಬಂಧಗಳಿಲ್ಲ, ಇರುವುದು ಸಾರ್ಥಕ ಘಳಿಗೆಗಳು ಮಾತ್ರ ಎನ್ನುವ ಮಾತನ್ನು ಎಚ್.ಎಸ್.ಆರ್. ಅವರು ಹೇಳುತ್ತಾರೆ. ಈ ಸತ್ಯವನ್ನು ಪ್ರತಿಭಾ ಅರಗಿಸಿಕೊಂಡವರಂತೆ ಬರೆಯುತ್ತಾರೆ.

'ಈ ಮಾರ್ಗವು ಚಾಲನೆಯಲ್ಲಿಲ್ಲ'

ಇವರ 'ಮಾತ್ರವಲ್ಲ' ಕನ್ನಡದ ಅತ್ಯುತ್ತಮ ಕವನಗಳಲ್ಲೊಂದು. ವೈಯಕ್ತಿಕ ಅನುಭವದ ಎಲ್ಲೆಯನ್ನು ಮೀರಿ ಸೋತ ಸಂಬಂಧವೊಂದು ಕಾಡುವ, ಕೊಡುವ ನೋವಿನ ಮೊದಲ ಘಟ್ಟವನ್ನು ದಾಟಿ, ಸಂಬಂಧಗಳ ಮೂಲ ಸ್ವರೂಪವೇ ಹೀಗಿರಬಹುದೇನೋ. ಹುಟ್ಟುವ ಸಂಬಂಧಗಳು ಸಾಯುವುದೂ ಅಷ್ಟೇ ನಿಜ ಎನ್ನುವ ತಾತ್ವಿಕ ನೆಲೆಯನ್ನು ವಿಲಕ್ಷಣವಾದ ಕಾವ್ಯಶಿಲ್ಪದಲ್ಲಿ ಈ ಕವನ ಹಿಡಿಯುತ್ತದೆ. ಬದುಕನ್ನು ತುಂಬಿದ್ದ ಆವರಿಸಿದ್ದ ಸಂಬಂಧವೊಂದು ಇದ್ದಕ್ಕಿದ್ದಂತೆಯೇ ಬದುಕಿನ ರಂಗದಿಂದ ಅದೃಶ್ಯವಾಗುವ ದುರಂತವನ್ನು ಪ್ರತಿಭಾ ಅಪಾರ ಸಂಯಮದಿಂದ ಚಿತ್ರಿಸಿದ್ದಾರೆಂದೇ ಅದೊಂದು ಕಾವ್ಯಶಿಲ್ಪವಾಗಿದೆ.

ಸದಾ ತೆರವಾಗಿದ್ದ ಮಾರ್ಗದಲ್ಲಿ ಅಡೆತಡೆ
ಈಗ ಮಾರ್ಗವು ಕಾರ್ಯ ನಿರತವಾಗಿದೆ
ದಯವಿಟ್ಟು ಸ್ವಲ್ಪ ಸಮಯದ ನಂತರ ಪ್ರಯತ್ನಿಸಿ
ಸ್ವಲ್ಪ ಸಮಯದ ನಂತರ ಪ್ರಯತ್ನಿಸಿದರೆ
ಮಾರ್ಗವು ಸದ್ಯಕ್ಕೆ ಸೇವೆಯಲ್ಲಿರುತ್ತಿರಲಿಲ್ಲ

ಈ ನೋವಿಗೆ ಅವರು ಕಂಡುಕೊಳ್ಳುವ ಕಾರಣ ನೋಡಿ —

ಹಾಗೆ ಸದಾ ಸೇವೆಯಲ್ಲಿರುವ ಬಗ್ಗೆ
ನಮ್ಮ ನಡುವೆ ಕರಾರೇನೂ ಆಗಿರಲಿಲ್ಲ'

ಇಷ್ಟಿದ್ದೂ ಈ ಮಾರ್ಗವು ಚಾಲನೆಯಲ್ಲಿದ್ದ ಕಾಲದ ಅನುಭವಗಳು ಕವಿಗೆ ಅಮೂಲ್ಯವೆಂದೇ ಅನ್ನಿಸುತ್ತದೆ. ಅದು ಕೊಟ್ಟ ಸಾರ್ಥಕತೆಯ ಅನುಭವವನ್ನು ನಿರಾಕರಿಸುವುದೂ ಇಲ್ಲ. ಅವುಗಳ ಬಗೆಗೆ ಸಿನಿಕತನದ ದೃಷ್ಟಿಯೂ ಇಲ್ಲ, ಪಾಪ ಪ್ರಜ್ಞೆಯೂ ಇಲ್ಲ. ಕೊಡುವಷ್ಟು ಕೊಟ್ಟು, ಪಡೆದಷ್ಟನ್ನು ಪಡೆದ ಈ ಸಂಬಂಧವನ್ನು ಆಧುನಿಕವೆನ್ನಬಹುದಾದ ನೈತಿಕ ನೆಲೆಯೊಂದರಲ್ಲಿ ನಿಲ್ಲಿಸಲು ಪ್ರತಿಭಾ ಪ್ರಯತ್ನಿಸುತ್ತಾರೆ. ಕರಾರುಗಳಿಲ್ಲದ, ಸಾಮಾಜಿಕವಾಗಿ ಒಪ್ಪಿತವೋ, ಪ್ರಶ್ನಾರ್ಹವೋ ಆಗಿರಬಹುದಾದ ಸಂಬಂಧವೊಂದು ಬದುಕನ್ನು ಬೆಳಗಿದ, ಅರಳಿಸಿದ ಘಳಿಗೆಯೇ ಅಂತಿಮವಾಗಿ ಪ್ರತಿಭಾಗೆ ಮುಖ್ಯ.

ಎಲ್ಲ ಸಂಬಂಧಗಳೂ ಅಂತಿಮವಾಗಿ ಹುಡುಕಾಟವೇ ಎನ್ನುವುದು ಇವರ ನಿಲುವಾಗಿರುವಂತೆ ತೋರುತ್ತದೆ. ಬದುಕಿನ ವಿಸ್ಮಯದ, ರೋಮಾಂಚನದ ಮೂಲವಿರುವುದೇ ಈ ಹುಡುಕಾಟದಲ್ಲಿ ಎನ್ನುವ ತೀವ್ರತೆಯಲ್ಲಿ ಪ್ರತಿಭಾ ಸಂಬಂಧಗಳ ಶೋಧನೆಗೆ ಒಡ್ಡಿಕೊಳ್ಳುತ್ತಾರೆ.

ಲೈಂಗಿಕ ನೆಲೆಯಲ್ಲಿಯೂ ಗಂಡು-ಹೆಣ್ಣುಗಳ ಸಂಬಂಧದ ಒಳ ಸುಳಿವುಗಳನ್ನು ಗುರುತಿಸುವಲ್ಲಿ ಇವರಿಗೆ ಆಸಕ್ತಿಯಿದೆ.

ಅದಕ್ಕೇ ನೋಡಿ, ಸಂಭೋಗದ ಸುಖಕ್ಕಿಂತ
ಮೂಡಿಲ್ಲದಾಗ ಸುಮ್ಮನಿರುವ ಸುಖ ಮೇಲೆಂದಿದ್ದಕ್ಕೆ
ಮರುದಿನ ಮಾತು ಬಿಟ್ಟು ಊಟ ಬಿಟ್ಟು
ಕೊನೆಗೆ ತನಗೇ ಬೇಜಾರಾಗಿ ರಾಜಿಯಾದಾಗ

ಎನ್ನುವ ಸರಳ ವಿಶ್ಲೇಷಣೆಯಿಂದ ಹಿಡಿದು ತೋರಿಕೆಯ ದಾಂಪತ್ಯ ಉಳಿದಿರುವುದು –

ಅಕಸ್ಮಾತ್ ಅವರ ಷರಟಿನ ಜೇಬಿನಲ್ಲಿ
ನನ್ನ ಹೇರ್‌ಪಿನ್ ಸಿಗುತ್ತದೆ
ಅದಕ್ಕೆ

ಎನ್ನುವುದನ್ನು ದಾಟಿ –

ಈಗ ಕತೆ ಮುಗಿಯುತ್ತಾ ಬಂದಿದೆ
ಈಗ ತನ್ನ ಪ್ರತ್ಯೇಕ ಕೋಣೆಗೆ
ರಾತ್ರಿ ಚಿಲಕ ಹಾಕಬೇಕಾಗಿಲ್ಲ
ಹೆಣ್ಣಿನ ಲೈಂಗಿಕತೆಯ ಬಗ್ಗೆ
ಯಾರೋ ಪ್ರಶ್ನೆ ಕೇಳಿದರು
ಅರ್ಥವಾಗದೇ ಪಿಳಿಪಿಳಿ ನೋಡಿದೆ

ಎನ್ನುವ ತನಕ ಮುಂದುವರಿಯುತ್ತದೆ.

ಹೆಣ್ಣನ್ನು ಲೈಂಗಿಕ ವ್ಯಕ್ತಿತ್ವದ ಅಸ್ತಿತ್ವದಲ್ಲೇ ಗುರುತಿಸಲು ಬಯಸುವ ವ್ಯವಸ್ಥೆಯು ಅವಳಿಂದ ಪಡೆಯಬಹುದಾದ ಲೈಂಗಿಕತೆಯ ಬಗ್ಗೆ ಮಾತ್ರ ಆಸಕ್ತವಾಗಿ ಅವರಿಗಿರಬಹುದಾದ 'ಲೈಂಗಿಕತೆ'ಯ ಬಗ್ಗೆ ನಿರ್ಲಿಪ್ತವಾಗಿರುವುದನ್ನು, ಅಮಾನವೀಯವಾಗಿರುವುದನ್ನು ದಟ್ಟ ಕೋಪದಲ್ಲಿ ಪ್ರತಿಭಾ ಪ್ರಶ್ನಿಸುತ್ತಾರೆ.

'ದಾಂಪತ್ಯ' ವ್ಯವಸ್ಥೆಯೂ ಪ್ರತಿಭಾರಲ್ಲಿ ಎಲ್ಲ ಬಗೆಯ ಪರೀಕ್ಷೆಗಳಿಗೆ ಒಳಗಾಗಿದೆ.

ಎಂತೆಂತಹ ಕದನಗಳನ್ನು ಕಾದಿದೆವು ನಾವು
ಹರಿತ ಖಡ್ಗ ಚಾಚಿ ಸೀಳಿ
ಕತ್ತರಿಸುವ ಮಾತು ಬಳಸಿ
ಯಾರಿಗ್ಯಾರು ಸೋಲಬೇಕು
ಯಾರಿಗೆ ಗೆಲುವು, ಯಾರ ಪಲಾಯನ
.......................
ಯುದ್ಧಾನಂತರ ಆರಿಸಿಕೊಂಡೆವು ಅಳಿದುಳಿದದ್ದು
..............
ಈ ಕೇಶದ ಗಡಿ ದಾಟಲಾರೆವು
ಕೈ ಕುಲುಕಿ ನಮ್ಮ ನಮ್ಮ ಮೂಲೆಗೆ ಸರಿದೆವು (ದಾಂಪತ್ಯ)

ಆಧುನಿಕ ದಾಂಪತ್ಯದಲ್ಲಿ ಬಿರುಕುಗಳು ಎಲ್ಲಿಂದ ಮೂಡುತ್ತವೆ ಎನ್ನುವುದೇ ಗೊತ್ತಾಗುವುದಿಲ್ಲ ಎನ್ನುವ ಆಶ್ಚರ್ಯವೂ ಇವರಲ್ಲಿ ಮತ್ತೆ ಮತ್ತೆ ಕಾಣಿಸುತ್ತದೆ. ಬಿರುಕಿನ ಅನುಭವ ಮಾತ್ರ ಭೀಕರ.

ಈ ಕೋಣೆ ಚಿಕ್ಕದು
ಇಲ್ಲದ ಕೋಪ ಹಿಡಿಸುವುದಿಲ್ಲ
ಗಾಳಿ ಸಾಲದು ಇಬ್ಬರ ಉಸಿರಾಟಕ್ಕೆ (ಸಂಗಾತ)

ಕೆಲವೊಮ್ಮೆ ಕಾರಣ ಹುಡುಕುವ ಪ್ರಯತ್ನವೂ ನಡೆಯುತ್ತದೆ.

ಎಲ್ಲ ಯಶಸ್ವಿ ಪುರುಷನ ಹಿಂದೆ
ಒಬ್ಬಳು ಮಹಿಳೆ
ಎಲ್ಲ ಯಶಸ್ವಿ ಮಹಿಳೆಯ ಹಿಂದೆ
ಒಬ್ಬ ಅತೃಪ್ತ ಪುರುಷ (ಸಂಗಾತಿ)

ಕೊನೆಯಲ್ಲಿ ಎರಡು ಅಂಶಗಳನ್ನು ಕುರಿತು ಪ್ರಸ್ತಾಪಿಸಬೇಕು. ಪ್ರತಿಭಾ ಕಾವ್ಯ ಅಂತಿಮವಾಗಿ ಯಾವುದನ್ನು ಗುರಿಯಾಗಿಟ್ಟುಕೊಂಡಿದೆ ಮತ್ತು ಕಾವ್ಯ ರಚನೆಯ ಬಗ್ಗೆ ಅವರ ನಿಲುವುಗಳು.

ಹೆಣ್ಣಿಗೆ ಸ್ಥಳ ನಿರ್ಮಾಣ – ಅವಕಾಶ ರಚನೆ – Space Constraction ಇವರ ಮೂಲ ಗುರಿ ಎನಿಸುತ್ತದೆ. ಇದು ಅವರ ಕಾವ್ಯದ ಅವಾಸ್ತವ ಹಂಬಲವಲ್ಲ. ಈ ಅವಕಾಶ ರಚನೆಯನ್ನು ಇವತ್ತಿನ ಹೆಣ್ಣು ಜೀವನ್ಮರಣದ ತೀವ್ರತೆಯಲ್ಲಿ ಕಟ್ಟಿಕೊಳ್ಳಲು ನಿರಂತರವಾಗಿ ಪ್ರಯತ್ನಿಸುತ್ತಿರುವುದನ್ನು ಘನತೆಯಲ್ಲಿ, ಆತ್ಮವಿಶ್ವಾಸದಲ್ಲಿ ಇವರ ಕಾವ್ಯ ದಾಖಲಿಸುತ್ತದೆ. ಹೆಣ್ಣಿನ ಮಟ್ಟಿಗೆ Spaceದತ್ತವೂ ಇಲ್ಲ, ಸಿದ್ಧ ಲಭ್ಯವೂ ಅಲ್ಲ, ಅದು ಅಪಾರ ಶ್ರಮದ ಗಳಿಕೆ. ಇದನ್ನು ಗಳಿಸಿಕೊಳ್ಳುವ ಸೃಷ್ಟಿಸಿಕೊಳ್ಳುವ ಅದಕ್ಕೆ ಅಧಿಕೃತತೆಯನ್ನು, ಲಭ್ಯತೆಯನ್ನು ಪಡೆದುಕೊಳ್ಳಬೇಕೆನ್ನುವ ಮಹತ್ವಾಕಾಂಕ್ಷೆ ಪ್ರತಿಭಾ ಕಾವ್ಯದ ಸ್ಥಾಯೀಭಾವ ಎಂದರೂ ನಡೆಯುತ್ತದೆ. ಇದನ್ನು ಗಳಿಸುವ ಕಷ್ಟಗಳೆಲ್ಲವೂ ಇವರ ಕಾವ್ಯದಲ್ಲಿ ದಾಖಲಾಗಿವೆ. ಗಳಿಸಿಕೊಳ್ಳುವ ಹೆಣ್ಣಿನಲ್ಲಿ 'ಅವರೊ'ಂದಿಗೆ ನಡೆಸಬೇಕಾದ ಘರ್ಷಣೆಯ ವಿವರಗಳು ಇವರ ಕಾವ್ಯಕ್ಕೆ ಜಗಳಗಂಟಿತನದ ಸ್ವರೂಪವನ್ನು ತಂದುಬಿಟ್ಟಿದೆ.

ನನಗೆ ಆಕಾರವಿಲ್ಲ
ನಿನಗೆ ನೋಟವಿಲ್ಲ
ಕಾಣಿಸುವುದು ಹೇಗೆ?
ನನಗೆ ಭಾಷೆಯಿಲ್ಲ
ನಿನಗೆ ಕಿವಿಯಿಲ್ಲ
ಮಾತನಾಡುವುದು ಹೇಗೆ?

ಈ ಮಾತುಗಳು ಘರ್ಷಣೆಯ ಅನಿವಾರ್ಯತೆಯನ್ನೂ, ತುರ್ತನ್ನೂ ಹೇಳುತ್ತವೆ. ಹೆಣ್ಣಿಗೆ ಆಕಾರವಿಲ್ಲ, ಯಾಕೆಂದರೆ ನೋಡುವವರಿಗೆ ಆಕಾರ ಬೇಕಿಲ್ಲ. ಇಲ್ಲಿನ ಪ್ರಶ್ನೆ ಆಕಾರವನ್ನು ಕಟ್ಟುವುದಲ್ಲ, ಭಾಷೆಯನ್ನು ಕಲಿಸುವುದೂ ಅಲ್ಲ, ನೋಡುವ ನೋಟವನ್ನು, ಕೇಳುವ ಕಿವಿಯನ್ನು ಸಿದ್ಧಗೊಳಿಸುವುದು.

ಕಾವ್ಯದ Formನ ಬಗ್ಗೆ ಪ್ರತಿಭಾ ತಳೆಯುವ ನಿಲುವಿನ ಬಗ್ಗೆ ಕೆಲವು ಮಾತುಗಳು; ಬದುಕಿನ ಅನುದಿನದ ಅಂತರಗಂಗೆಯನ್ನು ದಾಟಲು ಕಾವ್ಯವನ್ನು ನಾವೆಯಾಗಿ ಪ್ರತಿಭಾ ಬಳಸುತ್ತಾರೆ. ಕನ್ನಡ ಕಾವ್ಯ ಪರಂಪರೆಯ ವಿಸ್ತೃತವಾದ ಓದು, ಭಾರತೀಯ ಭಾಷೆಗಳಲ್ಲಿ ಬರೆಯುತ್ತಿರುವ ಓರಗೆಯ ಲೇಖಕರ ಬರವಣಿಗೆಯಲ್ಲದೆ ಜಗತ್ತಿನ ಇತರ ಭಾಷೆಗಳಲ್ಲಿ ಬರೆಯುತ್ತಿರುವವರ ಒಡನಾಟವೂ, ಕಾವ್ಯದ

ಪರಿಚಯವೂ ಇವರಿಗೆ ಗಾಢವಾಗಿಯೇ ಇದೆ. ಪ್ರತಿಭಾ ಕಾವ್ಯದ Formನ ಬಗ್ಗೆ ಅತಿಯಾಗಿ ತಲೆಕೆಡಿಸಿಕೊಂಡವರಲ್ಲ. ಭಾಷೆಯು ಕಾವ್ಯವಾಗುವ ಪವಾಡವನ್ನು ನಿಶ್ಚಿಂತೆಯಿಂದ ನಂಬಿರುವವರ ನಿರಾಳತೆಯಲ್ಲಿ ಪ್ರತಿಭಾ ಬರೆಯುತ್ತಾರೆ. ನವ್ಯದ ಭಾಷಾಶಿಲ್ಪದ ಮೋಹದಿಂದ ಹೊರಬಂದವರ ನಿರುಮ್ಮಳತೆಯಲ್ಲಿ ಬರೆಯುವ ಪ್ರತಿಭಾಗೆ ಹೀಗೆಂದ ಮಾತ್ರಕ್ಕೆ ಕಾವ್ಯ ಶಿಲ್ಪದ ಕಸುಬುದಾರಿಕೆಯ ಬಗ್ಗೆ ಅಥವಾ ಭಾಷಾ ಸೌಂದರ್ಯದ ಬಗ್ಗೆ ಅಸಡ್ಡೆಯಿದೆ ಎಂದಲ್ಲ. ಭಾಷೆಯ ದೃಷ್ಟಿಯಿಂದ ಪ್ರವರ್ತಕರಲ್ಲದಿದ್ದರೂ ತಮ್ಮದೇ ಆದ ದಾರಿಯನ್ನು ಹಿಡಿದು ನಡೆದವರು ಇವರು. ಯಾವುದನ್ನೂ ಪ್ರಶ್ನಿಸುವ ಎದೆಗಾರಿಕೆ, ಯಾವ ಹೊತ್ತಿಗೂ ಕಳೆದುಕೊಳ್ಳದ ಮಾರ್ದವ, ಎಲ್ಲ ಹೊತ್ತಿಗೂ ಉಳಿಸಿಕೊಳ್ಳಲು ಬಯಸುವ ಸೂಕ್ಷ್ಮತೆಯೇ ಇವರ ಕಾವ್ಯಕ್ಕೆ ಜೀವಂತಿಕೆಯನ್ನು, ವೈವಿಧ್ಯತೆಯ ಲಯವನ್ನು, ಪ್ರಸ್ತುತತೆಯನ್ನು ತಂದುಕೊಟ್ಟಿದೆ.

ಕೆಲವೊಮ್ಮೆ ಪ್ರತಿಭಾ ಕಾವ್ಯ loud ಎನ್ನಿಸುವುದುಂಟು. ಜನಪ್ರಿಯತೆಗೋ (ಅದು ಬೇಡವೆಂದೇನಲ್ಲ). ಘಳಿಗೆಯ ತುರ್ತಿಗೋ ಬರೆದ, ಮೊದಲ ಓದಿಗೇ ಮುಗಿದು ಹೋಗಿಬಿಡುವ ಕವನಗಳೂ ಇವೆ ಇದರಲ್ಲಿ.

ಬರವಣಿಗೆಯ ಮಹತ್ವವನ್ನು ಅವರ ಕಾವ್ಯಾತ್ಮಕ ಯಶಸ್ಸು ನಿರ್ಧರಿಸಬೇಕೋ, ಸನ್ನಿವೇಶದ ಅಗತ್ಯ ಮತ್ತು ತುರ್ತುಗಳು ನಿರ್ಧರಿಸಬೇಕೋ ಎನ್ನುವ ಚರ್ಚೆ ಅರ್ಥಪೂರ್ಣವಾಗಿ ನಡೆಯುತ್ತಿರುವ ಕಾಲಘಟ್ಟ ಇದು. ಚಾರಿತ್ರಿಕ ಮಹತ್ವದ ಸನ್ನಿವೇಶದಲ್ಲಿ ಕವಿಯ ಬಿಡಿ ಕವನಗಳ ಸೋಲು-ಗೆಲವುಗಳ ಚರ್ಚೆಗಿಂತ ಬರವಣಿಗೆಯ 'ಪ್ರಬಂಧ ಧ್ವನಿ' ನಿರ್ಣಾಯಕ. ಈ ದೃಷ್ಟಿಯಿಂದ ಪ್ರತಿಭಾರ ಒಟ್ಟು ಕಾವ್ಯವು ಕನ್ನಡ ಕಾವ್ಯಕ್ಕೆ ತಂದ ಹೊಸ ಆಯಾಮ, ಈ ತನಕ ಅಪರಿಚಿತರಾಗಿ ಉಳಿದಿದ್ದ ಸ್ತ್ರೀಲೋಕದ ಒಳ ವಿವರಗಳಿಂದ ಕನ್ನಡ ಕಾವ್ಯದ ಖಾಲಿ ಜಾಗವನ್ನು ತುಂಬಿದ ಮಹತ್ವದ ಕವಿ ಪ್ರತಿಭಾ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ.

೧೬/೨, ಪಟ್ಟಾಭಿರಾಮಚಂದ್ರ ನಿಲಯ
ನಾಲ್ಕನೇ ತಿರುವು, 'ಬಿ' ವಿಭಾಗ
ಗಾಂಧೀನಗರ, ಶಿವಮೊಗ್ಗ - ೫೭೭ ೨೦೧





# ಪ್ರತಿಭಾ ಕಾವ್ಯ: ಒಂದು ಮರು ಓದು

◆ ಡಾ. ಕವಿತಾ ರೈ ಬಿ.ಆರ್.

ನಾನು ಫೆಮಿನಿಸ್ಟ್ ಅಲ್ಲ, ಫೆಮಿನೈನ್ ಅಲ್ಲ ಎಂದು ಹೇಳಿಕೊಳ್ಳುವುದು ಪ್ರತಿಭಾಗೆ ಬಹಳ ಇಷ್ಟ, ಹಾಗೆ ನೋಡಿದರೆ ಯಾವುದೇ ನಿರೀಂದ್ರಿಯವಾದ ಆಲೋಚನೆ ಈ ಅನುಭವ ಮಗ್ನ ನಾಯಕಿಗೆ ಇಷ್ಟವಾಗುವುದಿಲ್ಲ, ಸರಿಯೇ, ಸುಮ್ಮನೆ ಇಷ್ಟಬಂದಂತೆ ಮಾಡುವ ವರ್ಗೀಕರಣ, ವಿಶ್ಲೇಷಣೆಗಳನ್ನು ಬದಿಗಿಟ್ಟು ಕವನಗಳನ್ನು ಅವುಗಳ ಶುದ್ಧ ಕಾವ್ಯಾತ್ಮಕತೆಗೆ ಓದುವುದನ್ನು ಕಲಿತರೆ ಒಳ್ಳೆಯದು: ಸ್ವಲ್ಪ ಬೋಲ್ಡ್ ಆಗಿ ಬರೆದರೆ ಫೆಮಿನಿಸ್ಟ್ ಅಂದುಬಿಡುವುದು, ಸ್ವಲ್ಪ ರೊಮ್ಯಾಂಟಿಕ್ ಆಗಿ ಬರೆದರೆ ಫೆಮಿನೈನ್ ಅನ್ನುವುದು ಇದನ್ನೆಲ್ಲ ಬಿಡಿ. ಇದೆಲ್ಲ ನಾನ್ಸೆನ್ಸ್. ಹೆಣ್ಣು ಎಲ್ಲದರ ಸಂಕೀರ್ಣ ಮಿಶ್ರಣ. ಯಾವುದನ್ನೂ ಸದಾ ತಿರಸ್ಕರಿಸುವುದೂ ಇಲ್ಲ, ಸದಾ ಪುರಸ್ಕರಿಸುವುದೂ ಇಲ್ಲ, (ಆಹಾ, ಪುರುಷಾಕಾರಂ!, ಕವಿತೆಗೆ ಕಾರಣ) ನವ್ಯರ ಗರಡಿಯಲ್ಲಿ ಕಲಿತ ಈ ಪಾಠಗಳನ್ನು ಬಹಳ ಗಂಭೀರವಾಗಿ ತೆಗೆದುಕೊಳ್ಳಬೇಕಾಗಿಲ್ಲ.'

ಪ್ರತಿಭಾ ನಂದಕುಮಾರ್ ಅವರ ಸಮಗ್ರ ಕವನ ಸಂಕಲನ 'ಮುನ್ನುಡಿ ಬೆನ್ನುಡಿಗಳ ನಡುವೆ'ಗೆ ಎಚ್.ಎಸ್. ರಾಘವೇಂದ್ರರಾವ್ ಬರೆದ ಮುನ್ನುಡಿಯಲ್ಲಿನ ಈ ಮಾತುಗಳನ್ನು ಗಂಭೀರವಾಗಿಯೇ ಪರಿಗಣಿಸಿ, ಅವರ ಕವನಗಳನ್ನು ಕೈಗೆತ್ತಿಕೊಳ್ಳುತ್ತಲೇ 'ಈ ಕವನ ಮಹಿಳಾ

ಸಂವೇದನೆಯ ತತ್ತ್ವಗಳನ್ನು ಪ್ರತಿಪಾದಿಸುತ್ತದೆಯೆ? ಕ್ರಾಂತಿಯ ಅಗತ್ಯಗಳನ್ನು ಸಾರುತ್ತದೆಯೇ? ಸಾಮಾಜಿಕ ಪ್ರತಿಶೋಧಗಳ ಬಗ್ಗೆ ಸ್ಪಷ್ಟ ಚಿತ್ರಣ ನೀಡುತ್ತದೆಯೇ? ಎನ್ನುವ ಅನ್ವೇಷಣೆಯನ್ನು ಇಲ್ಲಿ ನಡೆಸಿಲ್ಲ. (ಹಾಗೆ ಕೇಳಬೇಕು ಎಂದು ಸ್ತ್ರೀವಾದ ಎಲ್ಲಿಯೂ ಹೇಳುವುದಿಲ್ಲ) ಕವನ ಸಂಕಲನ ಒಂದು ತತ್ತ್ವಕ್ಕೆ ಜ್ಞಾನತಃ ನಿಷ್ಠೆ ಸಾರಿ ಅದನ್ನು ಕೃತಿಯಲ್ಲಿ ಸಾಧಿಸಿ ತೋರಿಸಬೇಕೆಂಬ ಒತ್ತಾಯವನ್ನು 'ಸ್ತ್ರೀವಾದ'' ಎಲ್ಲಿಯೂ ಹೇರಲಿಲ್ಲ. ಸ್ತ್ರೀವಾದದ ಒಳಗೆ ಸ್ವಾತಂತ್ರ್ಯವೆಂಬುದು ಪ್ರಪಂಚದ ಸ್ತ್ರೀಕರಣ. ಇದು ಹೆಣ್ಣು ಮತ್ತು ಗಂಡಿನ ನಡುವಿನ ಮಾನಸಿಕ ಮತ್ತು ದೈಹಿಕ ಲಿಂಗ ತತ್ತ್ವದ ದ್ವಂದ್ವ ಮತ್ತು ಬೇರ್ಪಡಿಸುವಿಕೆಗಿಂತ ಭಿನ್ನವಾದದ್ದು ಮಾತ್ರವಲ್ಲ, ಹೆಚ್ಚು ರಾಜಕೀಯ ಮತ್ತು ಸಾಂಸ್ಕೃತಿಕ ವೈರುಧ್ಯತೆಗಳ ಸೃಷ್ಟಿಯಾಗಿದೆ. ಸ್ತ್ರೀವಾದದಲ್ಲಿ ಸ್ವಾತಂತ್ರ್ಯದ ಮೂರನೇ ತತ್ತ್ವ ಹಾಗೂ ಪ್ರಕ್ರಿಯೆಯೊಂದಿದೆ. ಅದು ಲಿಂಗಭೇದವಿಲ್ಲದ ಹಾದಿ. ಪೌರುಷತ್ವ ಮತ್ತು ಸ್ತ್ರೀತ್ವ ಇವೆರಡೂ ಒಂದು ಇನ್ನೊಂದನ್ನು ಹೊರತಾಗಿಸುವ, ಅಭಿನ್ನವಾಗಿ ವಿವರಿಸಲಾದ ತತ್ತ್ವಗಳು. ಲಿಂಗರಹಿತ ತತ್ತ್ವದ ಒಳಗೆ ಸ್ತ್ರೀತ್ವವು ಸ್ತ್ರೀಯರಲ್ಲಿ ಮಾತ್ರ ಇರುವುದಲ್ಲ. ಅದು ಪ್ರಕೃತಿಯಲ್ಲಿ ಪುರುಷ ಮತ್ತು ಸ್ತ್ರೀಯರಲ್ಲಿ ಇರುವ ಚಟುವಟಿಕೆ ಮತ್ತು ಕ್ರಿಯಾಶೀಲತೆಯ ತತ್ತ್ವ. ಅದು ಸೃಷ್ಟಿಸುವ ನವಸಂಪೂರ್ಣತೆಯು ಲಿಂಗತ್ವವನ್ನು ದಾಟಿ ನಿಲ್ಲಬಲ್ಲುದು ಎಂಬುದು.

ನಿಜಹೇಳಬೇಕೆಂದರೆ, ಪ್ರತಿಭಾ ಅವರ ಕವನಗಳ ಓದಿಗೆ ಇಂಥ ಒಂದು ಪ್ರವೇಶ ಬೇಕಾಗುತ್ತದೆ. ಅವರ ಕವನಗಳಲ್ಲಿನ ಸ್ತ್ರೀ ತತ್ತ್ವದ ಮರುಶೋಧನೆಯು ಹಲವು ಬಗೆಯಲ್ಲಿ ಹೆಣ್ಣಿನ ಮನೋ ಮೇಲುಗೈ ಮತ್ತು ಹತ್ತಿಕ್ಕುವಿಕೆಗೆ ನೀಡಿದ ಪ್ರತಿಕ್ರಿಯೆ. ಈ ಹಿನ್ನೆಲೆಯಲ್ಲಿ ಹೆಣ್ಣು ಒಳಗೊಳ್ಳುವ ಸೃಜನಶೀಲ ರೂಪಗಳ ಮರುಗಳಿಕೆಯಾಗಿ ಅವರ ಕವನಗಳು ಕಾಣಿಸಿಕೊಳ್ಳುತ್ತವೆ. 'ನಾವು ಹುಡುಗಿಯರೇ ಹೀಗೆ', 'ಈ ತನಕ', 'ರಸ್ತೆಯಂಚಿನ ಗಾಡಿ', 'ಕವಡೆಯಾಟ', 'ಆಹಾ ಪುರುಷಾಕಾರಂ', 'ಅವರು ಪುರಾವೆಗಳನ್ನು ಕೇಳುತ್ತಾರೆ' ಈ ಸಂಕಲನಗಳಲ್ಲಿ ಹೆಚ್ಚಿನ ಕವನಗಳು ಅನುಭವ ವೇದ್ಯವಾದದ್ದು. ಓದುಗರಲ್ಲಿ ನಿಂತಲ್ಲಿ ನೆಲೆಯೂರದೆ ತೇಲುತ್ತ ನೆನಪಿನಲ್ಲಿ ಉಳಿಯುವಂಥದ್ದು. ನಿರ್ದಿಷ್ಟ ಸಾಂಸ್ಕೃತಿಕ ವಲಯಗಳಲ್ಲಿ ಹುಟ್ಟಿದ ಇಲ್ಲಿನ ಕವನಗಳು ಅವುಗಳ ಭಾಷಿಕ 'ಹಾವಭಾವ'ದಿಂದಲೇ ನಿಗೂಢವಾದ ಬಗೆಯಲ್ಲಿ ಓದುಗರನ್ನು ಪ್ರಭಾವಿಸುತ್ತವೆ. ಪ್ರತಿಭಾ ತನ್ನ ಮಾಧ್ಯಮದಲ್ಲಿ ಸಾಧಿಸ ಬಯಸುವ ಹೊಸ ದೃಷ್ಟಿಕೋನ ಆರಂಭದಲ್ಲಿ ಹೆಣ್ಣನ್ನು ಬಯಲುಗೊಳಿಸುವಂತೆ ತೋರಿದರೂ 'ಅವರು ಪುರಾವೆಗಳನ್ನು ಕೇಳುತ್ತಾರೆ'ಯ ಘಟ್ಟಕ್ಕಾಗಲೇ ಅದು 'ಕಾಮ'ವನ್ನು ನಿರ್ವಾಣಗೊಳಿಸುವ ಸ್ಥಿತಿಗೆ ತಲುಪುತ್ತದೆ.

ಪ್ರತಿಭಾ ಅವರ ಸಮಗ್ರ ಕವನಗಳ ಸಂಕಲನಕ್ಕೆ ಎಚ್.ಎಸ್. ರಾಘವೇಂದ್ರ ರಾವ್ ಅವರ ಮುನ್ನುಡಿ 'ಮೊಗ್ಗು ಮೊಗ್ಗಿಗೆ ಸೂಜಿ ಸೂಜಿ' ಅವರ ಕವನಗಳನ್ನು ಸಾಕಷ್ಟು ಸಮಗ್ರವಾಗಿ ಚರ್ಚಿಸಿದೆ. ಆದರೆ ಕವನಗಳ 'ಓದು' ಎನ್ನುವುದು ಪ್ರತಿ ಬಾರಿಯೂ ಸಾಂದರ್ಭಿಕವಾಗಿ ಭಿನ್ನ ದೃಷ್ಟಿಕೋನವನ್ನು, ನಿಲುವನ್ನು ದರ್ಶಿಸುತ್ತಿರುತ್ತದೆ. ಆದುದರಿಂದ ನನ್ನ ಈ ಓದು ಮತ್ತು ಗ್ರಹೀತ ಭಿನ್ನ ಪಾತಳಿಯಿಂದ ರೂಪು ಪಡೆಯುತ್ತದೆ.

ತನ್ನತನವನ್ನು ಉಳಿಸಿಕೊಳ್ಳಲು ತೀವ್ರವಾಗಿ ತಹತಹಿಸುವ ಪ್ರತಿಭಾ ಅವರ ಕವನಗಳಲ್ಲಿ ಕನ್ನಡ ಕಾವ್ಯ ಪರಂಪರೆಯನ್ನು 'ಸಕಾರಣ'ಪೂರ್ವಕವಾಗಿ ಒಪ್ಪಿಕೊಳ್ಳುವುದು ವ್ಯಕ್ತವಾಗುತ್ತದೆ. ಹೀಗಾಗಿಯೇ 'ಪ್ರತಿಭಾ ಅವರು, ಅಕ್ಕನ ವಚನಗಳಿಂದ ಹಿಡಿದು, ಪುರಾಣ-ಪುಣ್ಯಕಥೆಗಳ ತನಕ, ಬೇಂದ್ರೆಯವರಿಂದ ಮೊದಲಾಗಿ ಎ.ಕೆ.ರಾಮಾನುಜನ್ ಅವರ ಕವಿತೆಗಳವರೆಗೆ ಹಲವು

ಪಠ್ಯಗಳೊಂದಿಗೆ ನಡೆಸುವ ವಾಗ್ವಾದ' ದರ್ಶನ ಕಾವ್ಯ(visionary poetry)ದ ಪ್ರಭಾವವನ್ನು ಸ್ವಾನುಭವಕ್ಕೆ ಅನುಸಂಧಾನಗೊಳಿಸಿ ನೋಡುವುದನ್ನು ಪ್ರೇರೇಪಿಸುತ್ತದೆ.

'ಬ್ರಹ್ಮಜ್ಞಾನವೂ ಇಲ್ಲ ಲಘು ಗುರುಗಳೂ ಇಲ್ಲ
ನಿಶ್ಶಬ್ದ ಸಾನೆಟ್ಟಿನಲ್ಲಿ ರ್‍ಯಾಪ್‌ಗಣಗಳನುರಣನ
ಹೆದ್ದಾರಿಯಲ್ಲಿ ಬತ್ತಲಾದವರು ಎಲ್ಲಿ ಬಯಲಾದರೋ'

(ಒದ್ದಾಟ : ಪುಟ ೪೪೧)

ಹೀಗೆ ಹೇಳುವಾಗ ನೂರು ಕವನದ ತುದಿಗೆ ಒಂದು ಕೋಲು.

'ಅಕ್ಕರೆಯ ಸಾಗರದಲ್ಲಿ ತೇಲುವ ಪುಟ್ಟದೋಣಿಯ
ಹುಟ್ಟು ಹೊತ್ತೊಯ್ಯುತ್ತದೆ ದೂರ ದೂರ'

(ಯಾರಾದರೂ - ೨೪೫)

ಎಂಬ ಅರಿವಿದೆ. ಕವಿತೆ 'ಕೊಟ್ಟರೆ ಕೊರಳು ಬಿಟ್ಟರೆ ಉಸಿರು' ಎನ್ನುವ ಎಚ್ಚರವಿದೆ. 'ಮರೀಚಿಕೆ', 'ವೈತರಣಿ', 'ಎಕ್ಕ ಹುಟ್ಟಿದ ಮನೆ', 'ಹಿಮದ ಹಾದಿ', 'ಬೆಂಕಿ ಬೂದಿ' ಇಂಥವುಗಳಲ್ಲಿ visonaryಯ ಅದ್ಭುತ ಸಾಧ್ಯತೆಗಳಿವೆ.

ಮರಳುಗಾಡಿನ ನಡುವೆ ಒಂದೇ ಡೇರೆ
ಒಂದೇ ನಾಭಿ ಒಂದೇ ಉದಕ ಮಂಡಲ
ಆವಿ ಮೋಡದ ಚಿತ್ತಾರದ ನೀಲಿ ಸೆರಗು
ಹಾಸಿ ಬಯಲಲ್ಲಿ ಬರಿ ಹಸಿರು ತುಂಬಿ
ಫಲವತೀ ಪೃಥ್ವಿ ಹಡಿಯೇ ನನ್ನ
ಮನ ಮಿಡಿಯೇ ಈ ಜಡವ ತೊಡಿಯೇ
ಎಂದು ಬಯಸಿದ ನನ್ನ ಬಯಕೆಗಳು ಸುಡಲಿ
ನಾನು ಬಯಸಿದಂತೆ
ಕನಸುಗಳ ಬೂದಿ ಹಾರಿ ತೇಲಲಿ ನನ್ನ ಸುಟ್ಟು
ಭಸ್ಮವಾಗಿಸಿದಂತೆ.

ಇಂಥ ಸಾಲುಗಳಲ್ಲಿ ಅನುಭವ ದರ್ಶನ ತೇಲು ಮಟ್ಟದಲ್ಲಿ ಬರೀ ಹೇಳಿಕೆಗಳಾಗಿ ಉಳಿಯದೆ ಬದುಕನ್ನು ನೋಡುವ ಮತ್ತು ವ್ಯಾಖ್ಯಾನಿಸುವ ದೃಷ್ಟಿಕೋನವಾಗಿ ಕಾಣಿಸುತ್ತವೆ. ಮಾತ್ರವಲ್ಲದೆ ಇಂಥ ಬದುಕಿನ ಸಾಧ್ಯತೆಯನ್ನು ಪ್ರತಿಮೆಗಳ ಮೂಲಕ ತೆರೆದಿಡುವ ಬಗೆಯಲ್ಲಿ ವೈವಿಧ್ಯತೆ ಇದೆ.

'ಕೊನೆಗೆ ಬರೀ ನೆನಪು ಸೃಷ್ಟಿ ಸ್ಥಿತಿ ಲಯಗಳ ಬಾಂಡ
ಒಡೆದ ನಾಯಿ ಪಾಡು ಲಯಪಲಾಯನ
ದನಕ್ಕೆ ಮೇವು ಹಾಕದೆಯೇ ಹಾಲು ಮೊಸರು ಬೇಡಿ
ಬೆರಳು ನೆಕ್ಕಿ ಚಪ್ಪರಿಸಿ ಸೂರ್ಯ ಚಂದ್ರ ತಾರೆ
ಎಲ್ಲ ಒಂದೇ ಆಪೋಷನದಲ್ಲಿ ನುಂಗಿ ಈ ಭುವಿಯಲ್ಲಿ
ಆರಡಿ ಮೂರಡಿ ನೆಲಕ್ಕೆ ಬಾಯಿಬಿಡುತ್ತ ಹೋಗುವ
ಮೊದಲು ಒಂದೇ ಒಂದು ಬಾರಿ ಚಿಮ್ಮಲಿ ಚಿಲುಮೆ
ಅಮಾವಾಸ್ಯೆಯ ದಿನ ಚಂದ್ರನ ಬೆಳಕು ತುಂಬಲಿ
ಎಂದು ಹಂಬಲಿಸಿ ಮಲಗಿರುವಾಗ....'

(ಬಯಲು ೧೪೦)

ಇಂಥ ಪ್ರತಿಮೆಗಳು ಒಂದು ನೆಲೆಯಲ್ಲಿ ತನ್ನತವನ್ನು ಬಗೆಯುವ ಶೋಧಕ ಸಾಧನವಾಗಿ ತೋರುತ್ತವೆ. ಒಂದು ರೀತಿಯ ನೇತ್ಯಾತ್ಮಕತೆ ಅದರ ಜೊತೆ ಜೊತೆಗೆ ಗಾಢ ಹತಾಶೆಯನ್ನು ಅನುಭವಗಳಲ್ಲಿ ಸೆರೆಹಿಡಿಯುತ್ತವೆ. ಪ್ರತಿಭಾ ಅವರ ಹೆಚ್ಚಿನ ಕವನಗಳು ಹೆಣ್ಣಿನ ಚಾರಿತ್ರಿಕ, ಮಾನಸಿಕ ಸ್ಥಿತಿಯನ್ನು ಸೆರೆಹಿಡಿಯುವ ಮಾದರಿಯದ್ದಾಗಿದೆ. 'ನನಸು', 'ಆ ಹುಡುಗಿ', 'ಮೊಗ್ಗು', 'ಅವಳಿಗೆ ಗೊತ್ತು', 'ಐಶ್ವರ್ಯ', 'ಮೃಗನಯನಿಯ ವೃತ್ತಾಂತ', 'ಅವಳು-ಇವಳು', 'ವಚನ ಮೌನ'... ಇಂಥ ಕವನಗಳ ಕೇಂದ್ರ ಸೆಲೆ ಹುಡುಕಾಟಕ್ಕೆ ಬಿದ್ದ ಹೆಣ್ಣಿನ ಕನಸು-ಜೀವನದ ಕುರಿತದ್ದು. ಇವುಗಳ ಸತ್ತ್ವವಿರುವುದು ಅಂತರಂಗದ ಬಣ್ಣಗಳನ್ನು ಅದರ ಉತ್ಕಟತೆಯಲ್ಲಿ ತೆರೆದಿರುವ ಬಗೆಯಲ್ಲಿಯೇ ಆಗಿದೆ.

'ನಿನ್ನ ಹೆಣದ ಮೆರವಣಿಗೆ
ನೋಡದಂತೆ ಎಳೆದ ಪರದೆ
ಪಿಸು ಗಂಟೆಗಳ ಪುಟ್ಟ ಝಣತ್ಕಾರ
ಸೂರ್ಯ ಹುಟ್ಟಿ ಇಳಿಯುವ ನಡುವೆ
ಜಲಪಾತದಲಿ ಮಿಂದ ಹುಡುಗಿ
ಒಳಗೊಳಗೆ ಮೆಲ್ಲನೆ ಪುಟಿವ ಬೆಳಕು

ಕದಲದ ಗಾಢ ನಿದ್ದೆಗೆ ನಿನಗೆ
ತಿಳಿಯದು ಹೊರಗೆ
ಅರೆ ಬಿರಿದ ಮುಗುಳು
ಲಭ್ಯವಿಲ್ಲ ಅದರ ನಗೆ
ಹಾರ ಪೋಣಿಸುವ ನಾನು
ಚುಚ್ಚುತ್ತಿದ್ದೇನೆ
ಒಂದೊಂದು ಮೊಗ್ಗಿಗೆ
ಒಂದೊಂದು ಸೂಜಿ'

ಇಲ್ಲಿ ಬದುಕು ಮತ್ತು ಭಾವಗಳ ನಡುವೆ ಘರ್ಷಣೆ ಇಲ್ಲ. ಕನಸು ಮತ್ತು ವಾಸ್ತವದ ನಡುವೆಯೂ ಘರ್ಷಣೆ ಇಲ್ಲ. ಇವೆಲ್ಲ ಅಪೂರ್ವವಾದ ಸಾಮರಸ್ಯವನ್ನು ಪ್ರಕಟಿಸುತ್ತವೆ. ಈ ಹಿನ್ನೆಲೆಯಿಂದಲೇ ಅವರ ಕಾವ್ಯ ಹೆಣ್ಣು ಮತ್ತು ಸಮಾಜದ ನಡುವೆ ಕಾವ್ಯಾತ್ಮಕ ಸಮನ್ವಯ ಸಾಧಿಸಿವೆ. ಕವನದ ಕೇಂದ್ರ ಅನುಭವವನ್ನು ರೂಪಿಸುವುದು ಈ ಹೊತ್ತು ಹೆಣ್ಣಿನ ಚಿಂತನೆಯಲ್ಲಿ ಹಾಸು ಹೊಕ್ಕಾಗಿ ಹೋಗಿರುವ 'ಎನರ್ಜಿ' ಸಿದ್ಧಾಂತ 'ಕಥಾನಕ' ಕವನ ಈ ಸಿದ್ಧಾಂತವನ್ನು ಮೂಲದ ನೆಲೆಯಲ್ಲಿ ಒಂದು ಸೃಜನಶೀಲ ಪ್ರತಿಮೆಯಾಗಿ ರೂಪಿಸಿದೆ.

ಅವನು ಗೊತ್ತು
ತಾವು
ಸ್ಥಾನ ನಿರ್ದೇಶಕ
ಅವಳು ಹೊತ್ತು
ಸಮಯ
ಕಾಲ ಸೂಚಕ
ಅವನ ನಿಘಂಟಿನ ತುಂಬ
ಎಲ್ಲಿ? ಯಾಕೆ?

ಅವಳ ಕಾಳಜಿಗಳೆಲ್ಲ
ಯಾವಾಗ? ಎಷ್ಟು?

ಕಾಲ ದೇಶ ವರ್ತಮಾನಗಳ ಮುಖಾಮುಖಿಯಲ್ಲಿ ಅವರಿಗೆ ಪರಸ್ಪರ ಗುರುತು ಹತ್ತಿದ ಅಮಲು. ಹೀಗೆ ಹೆಣ್ಣು-ಗಂಡಿನ ವೈದೃಶ್ಯಗಳನ್ನು ತೆರೆದಿಡುತ್ತ ಸಾಮ್ಯತೆಯನ್ನು ಭಂಜಿಸುತ್ತ ಸಾಗುವ ಕವನ ಅದರ ಕೊನೆಯಲ್ಲಿ ಅದ್ಭುತವಾದ ಅನನ್ಯತೆಯನ್ನು ಸ್ಥಾಪಿಸುತ್ತದೆ.

ಬಸಿರ ಕಥಾನಕದಲ್ಲಿ
ಹಾಗೆ ಎದ್ದು ಹೋದರೆ ಏನೀಗ?
ಏನೀಗ ಯೋನಿಗೆ ಅಪಚಾರವಾದರೆ?
ಏನಿಲ್ಲ
ಬಿಟ್ಟು ಕೊಡುವುದೇ ಇಟ್ಟುಕೊಳ್ಳುವ ಏಕೈಕ
ಉಪಾಯ
ಎಂದು ಹೊಳೆದಿದ್ದೇ ಇಬ್ಬರಿಗೂ ನಿಚ್ಚಳ ಗೊತ್ತಾಗಿ
ಬಿಟ್ಟಿತು
ಅವನ ಭವಿಷ್ಯದಲ್ಲಿ ಅವಳಿಲ್ಲ
ಅವಳ ಚರಿತ್ರೆಯೊಳಗೆ ಅವನಿದ್ದಾನೆ

(ಕಥಾನಕ : ಪುಟ -೪೩೩)

ಸ್ತ್ರೀ ವಾದಿ ಚಹರೆಯ ಒಳಗೆ ಕಾವ್ಯ ಭಿನ್ನವಾಗುವುದು ಸತ್ತ್ವಶಾಲೀ ಸ್ವತಂತ್ರ ಅಸ್ತಿತ್ವವನ್ನು ಪ್ರಕಟಿಸುವುದು ಇಂಥ ನೆಲೆಗಳಲ್ಲಿಯೇ. ಮಹಿಳಾ ಕಾವ್ಯ ಚರಿತ್ರೆಯಲ್ಲಿ ಈ ಬಗೆಯ ನಿಲುವುಗಳಿಗೆ ಸಂವಾದಿಯಾಗುವಂತಹ ರಚನೆಗಳನ್ನು ಹೆಚ್ಚಿನ ಕವಯಿತ್ರಿಯರಲ್ಲಿ ಕಾಣಬಹುದಾದರೂ ಪ್ರತಿಭಾ ಅವರ ಕಾವ್ಯ ಆ ತಾತ್ತ್ವಿಕತೆಯನ್ನು ಅತಿ ಪರಿಣಾಮಕಾರಿಯಾಗಿ ಸಾಕ್ಷಾತ್ಕರಿಸುತ್ತದೆ.

ಕಾವ್ಯ ಅತ್ಯಂತ ಸಮರ್ಥ ಮಟ್ಟದ ಬೌದ್ಧಿಕ ಚಟುವಟಿಕೆ ಎಂಬ ವ್ಯಾಖ್ಯಾನ ಪ್ರತಿಭಾ ಅವರ ಕಾವ್ಯಕ್ಕೆ ಪೂರ್ಣವಾಗಿ ಅನ್ವಯವಾಗುತ್ತದೆ. ಹೆಣ್ಣಿನ ಇಡೀ ಜಗತ್ತನ್ನು, ಚರಿತ್ರೆಯ ಪಥವನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ವಿಶ್ಲೇಷಿಸುವ 'ಮುನ್ನುಡಿ ಬೆನ್ನುಡಿಗಳ ನಡುವೆ'ಯ ಹೆಚ್ಚಿನ ಕವನಗಳು ಜೊತೆಜೊತೆಗೆ ಹೆಣ್ಣಿನ ಬದುಕಿನ ಅಪಾರ ಸತ್ಯಗಳನ್ನು ದಾಖಲಿಸುತ್ತವೆ.

'ಅದೇನೂ ದೊಡ್ಡ ಸಾಹಸವಲ್ಲ
ಬ್ರಾ ಕಳಚಿದಷ್ಟೇ ಸುಲಭವಾಗಿ
ಬ್ರಾಹ್ಮಣ್ಯವನ್ನೂ ಕಳಚಬಹುದು
(ಸಾಧ್ಯವೇ ಇಲ್ಲ ಎನ್ನುವವರನ್ನು ಪಕ್ಕಕ್ಕಿಡಿ)
.........................................
ಎಲ್ಲ ನಿರೀಕ್ಷೆಗಳನ್ನೂ ಧರಿಸಿಕೊಂಡು ಬಂದು
ಬಾಗಿಲಲ್ಲಿ ನಾನು ನಿಂತಾಗ
ಅವರಿಗೆ ಕಂಡದ್ದು
ನಾನು ಮಾತ್ರವಲ್ಲ
ನನ್ನ ಬೆನ್ನ ಹಿಂದಿನ ಏಳು ತಲೆಮಾರು
ಹೆದರಿದ ಅವರೂ ಮುಂದಡಿಯಿಡಲಿಲ್ಲ
ನಾನು ಏನನ್ನೂ ಕಳಚಲಿಲ್ಲ' (ಪೊರೆ ಕಳಚುವುದು: ೪೩೮)

ಎನ್ನುವಾಗ ಪ್ರತಿಭಾ ವೈಚಾರಿಕ ಆಕೃತಿ ಮತ್ತು ಅನುಭವ ಗ್ರಹಣದ ಕ್ರಮವನ್ನು ಸರಳೀಕರಿಸುವುದಿಲ್ಲ, ಅನುಭವ ಸಾಧ್ಯತೆಯನ್ನು ಸಡಿಲಗೊಳಿಸುವುದಿಲ್ಲ. ಕವನದ ಕೊನೆಯ ಮೂರು ಸಾಲುಗಳು ಅನುಭವ ಪೃಥಕ್ಕರಣದ ಒಳಗೆ ಅಚಲ ನಿರ್ಧಾರವನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುತ್ತದೆ. ಸ್ತ್ರೀವಾದದ ಏಕರೂಪಿ ತಾತ್ತ್ವಿಕತೆಗೆ ಅತ್ಯಂತ ಸೂಕ್ಷ್ಮವಾಗಿ ಪ್ರತಿಕ್ರಿಯಿಸುವ ಪ್ರತಿಭಾ ಅದರ ಒಳಗೆ ರೂಪಿಸಿಕೊಂಡಿರುವ 'ವೈಚಾರಿಕ ತಾತ್ತ್ವಿಕತೆ' ಸ್ಫುಟವಾಗಿ ವ್ಯಕ್ತವಾಗುವುದು ಅವರ ಕಾವ್ಯ ಸೃಷ್ಟಿಗೆ ಸಂಬಂಧಿಸಿದ ಪರಿಕಲ್ಪನೆಗಳಲ್ಲಿ. ಅವರು ಕಂಡುಕೊಳ್ಳುವ ಅನುಭವಗಳ ಅತ್ಯಂತಿಕತೆಯಲ್ಲಿ ಸ್ತ್ರೀವಾದದ ಪರಿಚಿತ ಕಲ್ಪನೆಗಳ ಛಾಯೆ ಕಾಣಿಸಿದರೂ ಒಟ್ಟಾರೆಯಾಗಿ ಅದರ ಆಂತರಿಕ ಇಂಗಿತ ಭಿನ್ನ ಎಂಬುದೂ ತಕ್ಷಣವೇ ತಿಳಿಯುತ್ತದೆ. 'ಹೆಣ್ಣಿನ ಹೃದಯವೊಂದು ಸ್ಮಶಾನ'ದಂಥ ಕವನವನ್ನು ಉದಾಹರಣೆಗೆ ತೆಗೆದುಕೊಂಡರೂ ಇದು ಸ್ಪಷ್ಟವಾಗುತ್ತದೆ.

ಅಲ್ಲಿ ಚಿತೆಗಳು ಉರಿಯುತ್ತವೆ
ಗೋರಿಗಳನ್ನು ತೋಡಲಾಗುತ್ತದೆ
ಸ್ಮಾರಕಗಳು ಅಡಿಗೊಂದರಂತೆ

– ಎಂಬ ವಿವರವೇ ಹೆಣ್ಣಿನ 'ಇರುವಿಕೆ'ಯನ್ನು ಹಲವು ಆಯಾಮಗಳಿಂದ ನೋಡುವಂತೆ ಮಾಡುತ್ತವೆ. 'ನಾನು ಚಾಂಡಾಲ ಕನ್ಯೆ', 'ಹೆಣ್ಣು-ಕಾಡು', 'ಕಮಲಾ ಸುರೈಯಾ ಆದದ್ದು', 'ಹೆಣ್ಣು ಹುಲಿ', 'ನಾನು ಬ್ರಾಹ್ಮಣ ಕನ್ಯೆ', 'ಅರ್ಧನಾರೀಶ್ವರ'; ಇಲ್ಲೆಲ್ಲ ಪರಿಚಿತವಾದ ಸ್ತ್ರೀವಾದಿ ಪರಿಕಲ್ಪನೆಗಳನ್ನು ದರ್ಶಿಸಿದಂತೆ ಅನಿಸಿದರೂ ಇವುಗಳ ಆಂತರಿಕ ತರ್ಕ ಅವರದ್ದೆ. 'ಲಿಂಗತ್ವ'ದ ಸ್ತ್ರೀವಾದಿ ನಿರ್ವಚನವನ್ನು ಮತ್ತು ಕವಿಯ ತಾತ್ತ್ವಿಕ ಹಂಬಲವನ್ನು ಸಹಜ ಎಂಬ ರೀತಿಯಲ್ಲಿ ಕಾವ್ಯ ತನ್ನ ಒಡಲಲ್ಲಿ ಧರಿಸಿಕೊಂಡಿದೆ.

ಗಂಡೆಂದರೆ ಒಂದು ವೀರ್ಯ ತಾನೇ?
ಉಳಿದಂತೆ ಕೈಕಾಲು ಎದೆ ಹೊಟ್ಟೆ ಬರಿ
ಬವಣೆ. ಗಂಡೆಂಬ ಗತ್ತು ಗರ್ವ ಗೌಡಿಕೆ
ಗಳು ಮಲಗಿ ಬಿಡುತ್ತವೆ ಕೆಲಸವಾದ ಮೇಲೆ
ಒಬ್ಬಳೇ ಇರಬಲ್ಲನೆಂದು ಸಾಧಿಸಿದ ನಂತರವಂತೂ
ಈಶ್ವರ ಮೂಲೆ ಹಿಡಿದು ಮುಲುಗುತ್ತಾನೆ ಮೂದೇವಿಯಂತೆ
ಅಡಗಿದೆ ಸಣ್ಣ ಕಡ್ಡಿಯಲ್ಲಿ
ಕಾಡು ಸುಡುವ ಬೆಂಕಿ (ಅರ್ಧನಾರೀಶ್ವರ : ೪೭೫)

ಗಂಡು-ಹೆಣ್ಣು ಎಂಬ ಲಿಂಗಸ್ವರೂಪದ ನಡುವಿನ ಭಿನ್ನತೆಗಳ ಸ್ಪಷ್ಟ ಅರಿವು ಪ್ರತಿಭಾ ಅವರ ಸೃಜನಶೀಲತೆಯ ಮೂಲ ನೆಲೆಯೇ ಹೌದಾದರೂ ಅವರು ಎಲ್ಲೂ ಅದನ್ನು ಘೋಷಣಾತ್ಮಕವಾಗಿ ಪ್ರಕಟಿಸುವುದಿಲ್ಲ. ಧ್ವನಿತಾರ್ಥದ ಸೂಕ್ಷ್ಮ ಸಂವೇದನೆ ಸದಾ ಕಾವ್ಯ ಗ್ರಹೀತವನ್ನು ಕಟ್ಟುತ್ತಾ ಸಾಗುತ್ತದೆಯೇ ಹೊರತು ಬಂಧ ಶಿಥಿಲವಾಗುವಂತೆ ಸಡಿಲುವಾಗುವಂತೆ, ಬಿಚ್ಚಿಕೊಳ್ಳುವಂತೆ ಎಲ್ಲೂ ಸರಳೀಕರಣಗೊಳ್ಳುವುದಿಲ್ಲ. ಅನುಭವ ಸಾಂದ್ರವಾಗಿ ಒಳನೋಟವನ್ನು ಸ್ಫೋಟಿಸುವ ಗುಣ ಅವರಿಗೆ ಸಿದ್ಧಿಸಿರುವ ಕಾರಣ ಲಿಂಗಸೂಕ್ಷ್ಮತೆಯನ್ನು ಪ್ರತಿನಿಧಿಸಿಯೂ ಎಚ್ಚರವನ್ನು ಕಾಯ್ದುಕೊಳ್ಳುವುದು ಸಾಧ್ಯವಾಗುತ್ತದೆ. ಗಂಡು-ಹೆಣ್ಣು ಎಂಬ ಲಿಂಗಸಂಬಂಧಿ ಸಮೀಕರಣವನ್ನು ಕುರಿತು ಎಚ್.ಎಸ್.ಆರ್. ಹೀಗೆ ವಿವರಿಸುತ್ತಾರೆ— 'ಈ ಭಿನ್ನ ಶಕ್ತಿಗಳ ಅರಿವು ನಿರ್ದಿಷ್ಟ

ಅನುಭವಗಳ ಸನ್ನಿವೇಶಕ್ಕೆ ಅನುಗುಣವಾಗಿ ಬದಲಾಗುತ್ತ ಹೋಗುತ್ತದೆ. ಮೂಲತಃ ಅವರ ಕವನಗಳಲ್ಲಿ ನಾಟಕೀಯತೆಯನ್ನು ಕಾಪಾಡಿಕೊಂಡು ಬಂದಿರುವುದು ಈ ಅರಿವೇ ಎಂದರೂ ಸಲ್ಲುತ್ತದೆ.'

ಪ್ರತಿಭಾ ಅವರ ಕಾವ್ಯಮೀಮಾಂಸೆಯ ತಾತ್ವಿಕತೆಯಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕಾವ್ಯದ ಸ್ವರೂಪ ಮತ್ತು ಹೊಣೆಗಾರಿಕೆಯ ಬಗ್ಗೆ ಅವರ ನಿಲುವುಗಳು ತಾತ್ವಿಕತೆ ಮತ್ತು ಅನುಭವಗಳ ಒತ್ತಡಗಳ ನಡುವೆ ನಡೆದ ಸೃಜನಾತ್ಮಕ ಸಂಘರ್ಷದ ಮೂಲಕ ಅವರ ಕವನಗಳು ನಾದ, ಬಣ್ಣ, ಪದರುಗಳನು ಉಳಿಸಿಕೊಳ್ಳುವುದು ತೋರುತ್ತದೆ. ಈ ಎಲ್ಲ ಮಾತುಗಳನ್ನು ಪ್ರತಿಭಾ ಸಮಗ್ರ ಕವನಗಳನ್ನು, ಕಾವ್ಯ ಜೀವನವನ್ನು ಗಮನದಲ್ಲಿಟ್ಟುಕೊಂಡೇ ಹೇಳಲಾಗಿದೆ. 'ನಾವು ಹುಡುಗಿಯರೇ ಹೀಗೆ' ಸಂಕಲನದಿಂದ ಹಿಡಿದು 'ಅವರು ಪುರಾವೆಗಳನ್ನು ಬಯಸುತ್ತಾರೆ' ವರೆಗೆ ಪ್ರತಿಭಾ ಎಡೆಬಿಡದೆ ಬರೆದಿರುವ ನೂರಾರು ಕವಿತೆಗಳಲ್ಲಿ ಒಂದು ಖಚಿತವಾದ ಬೆಳವಣಿಗೆಯಿದೆ. ಅದು ತನ್ನನ್ನು ತಾನು ಕಂಡುಕೊಳ್ಳುವ ಹಾಗೂ ಕಟ್ಟಿಕೊಳ್ಳುವ ಪ್ರಜ್ಞೆಯೊಂದರ ಬೆಳವಣಿಗೆ. ಅದರ ಸಂಗಡವೇ ಅವರ ಅಭಿವ್ಯಕ್ತಿ ವಿಧಾನವೂ ಬದಲಾಗುತ್ತ ಬಂದಿದೆ. ಈ ಪ್ರಜ್ಞೆಯು ಉಲ್ಲಾಸ-ಉತ್ಸಾಹಗಳ ಸಂಗಡದ ನಿರಾಶೆಯಿಂದ ಮೊದಲಾಗಿ, ತೀವ್ರ ವಿಷಾದದ ಅಗ್ನಿ ಪಥದಲ್ಲಿ ಚಲಿಸಿ ಕೊನೆಗೆ ಒಂದು ರುದ್ರ ದರ್ಶನದಲ್ಲಿ ವಿರಮಿಸಿದೆ. ಅವರ ಕವಿತೆ ಅದಕ್ಕೆ ಹಿಡಿದ ಕನ್ನಡಿ. ಈ ಬೆಳವಣಿಗೆಯು ಎಲ್ಲ ಹೆಣ್ಣುಗಳೂ ಹಿಡಿಯಬಹುದಾದ, ಹಿಡಿಯಬೇಕಾದ ಹಾದಿಯಾಗಿರುವುದರಿಂದಲೇ ಪ್ರಸ್ತುತವಾಗುತ್ತದೆ' (ಎಚ್.ಎಸ್. ರಾಘವೇಂದ್ರರಾವ್, ಮುನ್ನುಡಿಯಲ್ಲಿ)

ಪ್ರತಿಭಾ ಅವರ ಯಶಸ್ವೀ ಕವನಗಳ ಮುಖ್ಯಶಕ್ತಿ ಹೆಣ್ಣು-ಗಂಡಿನ ನಡುವಿನ ಕಾಮ ಸಂಬಂಧೀ ಸಂಘರ್ಷದ ಕುರಿತದ್ದು. ಕಾಮವನ್ನು ಸ್ಥಾಯಿಯಾಗಿ ಕೇಂದ್ರದಲ್ಲಿಟ್ಟು ಅನ್ವೇಷಣೆ ನಡೆಸುವುದೇ ಅವರ ಕವನಗಳ ಪ್ರಜ್ಞಾಪೂರ್ವಕ ಎನರ್ಜಿಯೆಂದು ತೋರುತ್ತದೆ.

ಪರಮೋಚ್ಚ ಸೌಂದರ್ಯ
ಜೊತೆಗೆ ಗರ್ವ ಕಾರಣ ವೀರ್ಯ
ಉಪಾಸನೆಯ ಸಂತ
ಕಾಮ ವಿಕಾರ ರೂಪ ಹಂತ
ರಜನೀಶ ಸ್ವಂತ
ತಿಳಿಯದ ತಿಳಿ
ತಿಳಿದ ರಾಡಿ (ಆಹಾ, ಪುರುಷಾಕಾರಂ! – ೩೬೧)

'ಆಹಾ, ಪುರುಷಾಕಾರಂ'ನಲ್ಲಿ ಒಂದು ಪ್ರಜ್ಞಾಪೂರ್ವಕ ಅನುಭವ ಚೌಕಟ್ಟನ್ನು ನೀಡಲು ಹವಣಿಸಲಾಗಿದೆ. ಪ್ರಾಥಮಿಕ ಅರ್ಥಗ್ರಹಣದ ಪ್ರಯತ್ನದಲ್ಲಿ 'ಗಂಡಿನ' ಪೇಟ್ರಿಯಾರ್ಕಲ್ ಸ್ವರೂಪವನ್ನು ಇದು ಶಕ್ತವಾಗಿ ಸ್ಥಾಪಿಸುತ್ತದೆ.

'ಅತಿ ನಿಗ್ರಹದ ಮತಿ
ಇಲ್ಲವೇ ಬಟಾಬಯಲ ಭಾತಿ
ದೇವರೇ ಗತಿ
ಅನುನಯದ ಭ್ರಾಂತ ರೀತಿ

ಭದ್ರ ಉರಿವ ಸೂರ್ಯ
ಲಕ್ಷ ಮಿಂಚುಗಳ ಸೆರೆ
ಕಣ್ಣೊಳಗೆ ನೂರು ತಂತ್ರ
ಕಬ್ಬಿಣ ಯಂತ್ರ'

– ಎಂಬ ಸಾಲುಗಳು ಪ್ರಜ್ಞಾಪೂರ್ವಕ ಎನರ್ಜಿಯ ಅಭಿವ್ಯಕ್ತಿಯಷ್ಟಕ್ಕೆ ಸೀಮಿತವಾಗಿ ಕಾಣದೆ ಪುರುಷ ಮತ್ತು ಪೇಟ್ರಿಯಾರ್ಕಲ್ ಸ್ವರೂಪದ ಮೂಲಭೂತ ಶಕ್ತಿಗೆ ಸಿದ್ಧಾಂತರೂಪೀ ವಿವರಣೆಯನ್ನು ನೀಡುತ್ತದೆ. ಪುರುಷಾಕಾರದ ಮುಂದೆ ಹೆಣ್ಣು ಏನು? 'ಸ್ತ್ರೀ ರೂಪಮೇ ರೂಪಂ। ನಿರ್ದಿಷ್ಟವಾಗಿ ಪ್ರಣಯ ಮತ್ತು ಸ್ತ್ರೀ....' ಎನ್ನುವ ವಾಸ್ತವವನ್ನು ಪ್ರತಿಭಾ ಹೆಚ್ಚಿನ ಕವನಗಳಲ್ಲಿ ಅನಾವರಣಗೊಳಿಸುವುದು ಇದೆ. ಅವರ ಕವನಗಳ ಒಳಗೆ ಆಳವಾಗಿ ಮುಳುಗಿಹೋದ ಓದುಗರು ಗಂಡು-ಹೆಣ್ಣಿನ ಸಂಬಂಧವನ್ನು 'ಬೆತ್ತಲುಗೊಳಿಸಿ'ಯೇ ನೋಡಬೇಕಾಗುತ್ತದೆ.

ಬಾಹ್ಯ ಜಗತ್ತಿನ ಎಲ್ಲ ರೂಢ ಮೂಲ ನಿಯಮಗಳು ಕಾಮಾತ್ಮಕ ಪ್ರತಿಮಾವಳಿಗಳಲ್ಲಿ ಹಲವು ಬಗೆಯ ರೂಪ ಪಡೆದು ಅದರ ಒಳ ವಿಸ್ತಾರಕ್ಕೆ ಕೂಡಾ ಕಾರಣವಾಗುತ್ತವೆ. ಮಾತ್ರವಲ್ಲದೆ ಗಂಡು-ಹೆಣ್ಣಿಗೆ ಸಂಬಂಧಿಸಿದ ಎಲ್ಲ ಕವನಗಳ ಸತ್ತ್ವ-ಕೇಂದ್ರ ಗ್ರಹಿಕೆ 'ಕಾಮವಾಸನೆ'ಯಾಗಿ ಕಾಣಿಸುತ್ತವೆ. ಹೀಗಾಗಿಯೇ ಇಲ್ಲಿನ ಕಾಮವೆನ್ನುವುದು ಏಕಕಾಲಕ್ಕೆ ವಸ್ತುವೂ ಹೌದು, ಜೀವನ ದರ್ಶನವೂ ಹೌದು.

''ಶಾಶ್ವತ ಗುರುತುಗಳು ಅವನ ಏರಿಳಿವ ಎದೆಯಲ್ಲಿ
ಅವಳ ಒಡಲಲ್ಲಿ ಬಿರಿವ ತುಟಿ ತೊಡೆಯ ಸ್ನಾಯುಗಳಲ್ಲಿ
ಹಿತದ ನೋವು. ಇದು ಲಕ್ಷಾಗೃಹಕ್ಕಿದು ಮತ್ತೊಂದಕ್ಕೆ ಎಂದು
ಎಣಿಸೆಣಿಸಿ ಬೀಸಿದ ಗದೆ ಪೆಟ್ಟಿಗೆ ಕುಸಿದವನಂತೆ ತನ್ನ
ದಾಳಿಗೆ ಹೈರಾಣಾಗಿ ಪವಡಿಸಿದ್ದ ಅವನು ಅವಳ ಪೃಷ್ಠಕ್ಕೊಂದು
ಕೈಕೊಟ್ಟು ಸೆಳೆಯುವವನಂತೆ ಈಗಲೇ ಇನ್ನೆರಡು ಕ್ಷಣಗಳಲ್ಲಿ
ಮತ್ತೆ ತೊಡಗುವವನಂತೆ ರಾಸಕ್ರೀಡೆಗೆ''

(ರಾಸಕ್ರೀಡೆ ಮತ್ತು ನಂತರ : ೪೫೩)

ಇಲ್ಲಿ ಗಂಡು-ಹೆಣ್ಣು ತಮ್ಮ ವ್ಯಕ್ತಿತ್ವವನ್ನು 'ಕಂಡುಕೊಳ್ಳುವುದು' ಮತ್ತು 'ನೀಗಿಕೊಳ್ಳುವುದು' ಕಾಮದ ಒಳಗೆ. ಇದರಲ್ಲಿ ಮಾನವೀಯ ಸತ್ತ್ವ ತುಂಬಿದ ಉದಾತ್ತ ಪ್ರಕ್ರಿಯೆ ಕಾಣದೆ ಬರೇ 'ಅನ್ವೇಷಣೆಯೇ' ವಸ್ತು ವಿನ್ಯಾಸದ ಹಿಂದಿರುವ ತರ್ಕವಾಗುತ್ತದೆ. ಕಾಮ ತನ್ನ ಮೂಲ ರೂಪದಲ್ಲಿ ವಿಜೃಂಭಿಸುವ ಸ್ಥಿತಿ ಇದು.

''ಒಂದೊಂದು ಕೃತಿಯೂ ಒಂದೊಂದು ಮೊಗ್ಗು ಜಡೆ ಹೆಣೆದ ನಾಲ್ಕು ದಿನ
ಮಲ್ಲಿಗೆಯ ಪರಿಮಳ ರಾತ್ರಿ ಹೊರಳಿದರೆ ನಿನಗೆ ನೆನಪಿಸುವ
ಕಲಾಸಿಪಾಳ್ಯದ ಸೂಳೆ, ಹೆಣ್ಣಿನ ಬಂಡವಾಳವೇ ಅವಳ ದೇಹ ಎಂದದ್ದಕ್ಕೆ
ಪಾಪ ಖುಶವಂತನಿಗೆ ಎಂತಹ ಕಷ್ಟ, ಜೋತ ಮೊಲೆಗಳ ಮುಂದೆ ಸೋತ ಕೈಗಳು
ತಟಸ್ಥ, ಬುದ್ಧಿವಂತಳು ಮಾತ್ರ ಹಿಡಿದು ನಿಲ್ಲಿಸುತ್ತಾಳೆ– ಸೂರ್ಯಾಸ್ತ''

(ಗರ್ವ : ಪುಟ ೪೮೭)

''ಅಷ್ಟು ಸಾಕೇ ನಿನ್ನ ಕಟ್ಟುಪಾಡಿಗೆ
ಗಂಡೆಂದರೆ ಬರೀ ವೀರ್ಯ ತಾನೇ ಎಂದ ಮಾತಿಗೆ
ಉತ್ತರದ ಚಾಟಿ ಬೀಸುವುದಿಲ್ಲ ನೀನು ನಿನಗೆ ಗೊತ್ತು
ಕೆಳ ತುಟಿಯ ಜೊಲ್ಲು ಬರಿ ಬಾಯಿ ಮಾತಿನ ಸೊಲ್ಲು

ಕಳಚಿಟ್ಟರೆ ನಾನೂ ನನ್ನ ಒಳಾವರಣದ ಕವಚ
ನಿನಗೆ ಬೇಕಾದ ಭಾಗ ಹೊರಗಿದೆ ಕಚ ಕುಚ
ಒಳಗಿನ ಮತ್ತೆ ಮತ್ತೇರಿಸುವುದಿಲ್ಲ
ಬಸಿರು ಬಗಿದು ಉಣಲು ಕೊಟ್ಟರ ನಿನಗೆ ಹಸಿವಿಲ್ಲ
ರಕ್ತದೋಕುಳಿಯಲ್ಲಿ ಆಸಕ್ತಿಯಿಲ್ಲ
ಅಯ್ಯೋ, ಶಿವಶಿವೆಯರ ಸಮಾಗಮವಿಲ್ಲದೆ ಕುಮಾರ ಸಂಭವವಿಲ್ಲ''

(ವೃಥಾ ಒಂದು ಕವನ : ೪೯೫)

'ಅವಳು ತನ್ನವಳಾದಷ್ಟು ತಾನು ಅವಳವನಲ್ಲ
ತನ್ನ ವೀರ್ಯದ ಆತ್ಮಕ್ಕೆ ಸಾಟಿಯೇ ಅವಳ ಬಸಿರ ಕಾಮು
ಬೆದೆಗೆ ಬಂದವಳನ್ನು ಬಲೆಗೆ ಸಿಕ್ಕಿಸಿ ಉಜ್ಜಿ ಸಿಪ್ಪೆ ಸಿಗಿದು
ಕತ್ತರಿಸಿ ಬಾಂಡಲೆಯಲ್ಲಿ ಮಸಾಲೆ ಸಹಿತ ಹುರಿದು
ಕರುಳ ಕುದಿತಕ್ಕೆ ಬಲಿಕೊಟ್ಟು ಬಾಯೊಡ್ಡಿ ಚಪ್ಪರಿಸಿ ತೇಗಿ ಆಹಾ
ಜೋತ ಮೊಲೆ ಸೋತ ತುಟಿಯ ಪುಳಕವೇನು ಮಹಾ
ಎಂದು ಹಂಗಿಸಿ ನಿಗುರಿದ ಶಿಶ್ನದಿಂದ ತಿವಿದು ಮೂತಿ
ಎದೆಯ ಹೊಲದ ಬೆಳೆ ಕಿತ್ತು ಕೊಟ್ಟವಳು
ಉಪ್ಪರಿಗೆಯವಳಿಗಿಂತ ಮಿಗಿಲಲ್ಲ
ಕಾದವಳ ಕಾಯದ ಕಿಮ್ಮತ್ತು ಭಾರಿಯಲ್ಲಿ
ಬರಿ ತೊಗಟೆ ಇವಳು ಅವಳು ಮುಖಮಲ್ಲು' *(ಮಹಾ ನಿರ್ಗಮನ : ೫೦೭)*

ಈ ಮೂರು ಕವನಗಳಿಗೆ ಎರಡು ಸ್ತರಗಳ ಅಸ್ತಿತ್ವವಿದೆ. ಒಂದು ಘೋಷಿತ ಅಭಿವ್ಯಕ್ತಿ ತತ್ತ್ವ. ಇಲ್ಲೆಲ್ಲಾ 'ಕಾಮ' ಅರ್ಥಪರಂಪರೆಯಲ್ಲಿ ಒಂದೇ ಸ್ತರದಲ್ಲಿ ಕೆಲಸ ಮಾಡುತ್ತದೆ. ಆದರೆ ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಇವುಗಳ ಒಂದು ನಿರ್ದಿಷ್ಟ ಸ್ತರ. ಪ್ರಜ್ಞಾಪೂರ್ವಕವಾಗಿ ನಿಯೋಜಿಸಿದ್ದು. ಸ್ತ್ರೀವಾದದ ಸೈದ್ಧಾಂತಿಕ ಅರ್ಥ ಹೊರಡುವುದು ಇಲ್ಲಿಂದಲೇ. ಹೆಣ್ಣು-ಗಂಡಿನ ಶರೀರದಲ್ಲಿನ ದ್ವಂದ್ವ ಸ್ತರಗಳನ್ನು ಇದು ಪರಿಣಾಮಕಾರಿಯಾಗಿ ಅನಾವರಣಗೊಳಿಸುತ್ತದೆ. ಪ್ರತಿಭಾ ಅವರ ಕವನಗಳಲ್ಲಿ ಅನಾವರಣಗೊಳ್ಳುವ ಸಂಭೋಗಾನುಭವದ ಪರಸ್ಪರ ವೈರುಧ್ಯತೆಗಳೇ ಸ್ತ್ರೀವಾದ ನಿರೂಪಿಸುವ ಭಿನ್ನತೆಯ ಆಯಾಮವಾಗಿದೆ. ಎಂದರೆ, ಅಭಿವ್ಯಕ್ತಿ ಸಾಮಗ್ರಿಯೇ 'ಅಭಿವ್ಯಕ್ತ'ವನ್ನು ಸಂಪೂರ್ಣವಾಗಿ ಶಕ್ತವಾಗಿ ನಿಯಂತ್ರಿಸುತ್ತದೆ. ಮಾತ್ರವಲ್ಲದೆ ಎಲ್ಲ ಅನುಭವಗಳೂ ಅಂತಿಮವಾಗಿ ಹೆಣ್ಣಿನ ವಾಸ್ತವ ಸ್ಥಿತಿಯನ್ನು ಹಲವು ಬಗೆಯಲ್ಲಿ ಬಗೆಯುತ್ತವೆ.

ಒಟ್ಟಿನಲ್ಲಿ ಇಲ್ಲಿ ಗಂಡು-ಹೆಣ್ಣಿನ ಕಾಮ ಸಂಬಂಧದ ವಸ್ತು ನಿರೂಪಣೆಯಲ್ಲಿ ಗಮನಿಸಬೇಕಾದ ಅಂಶವೆಂದರೆ, ಪ್ರತಿಭಾ ಅವರ ಕವನಗಳು ಸ್ಥಾಯೀಭಾವ ಅಥವಾ ಕೇಂದ್ರರೂಪೀ ಸಂಚಲನ ಎಂದು ಕರೆಯಬಹುದಾದ 'ಫ್ಯಾಲಿಕ್' ಸಂಕೇತಗಳನ್ನು ಒಡೆಯುತ್ತವೆ, ಭುಂಜಿಸುತ್ತವೆ. ವಿವರಿಸುವುದಾದರೆ, ಫ್ಯಾಲಿಕ್ ಸಂಕೇತ, ರಚನೆಗಳು ಪಿತೃಸರ್ವಾಧಿಕಾರೀ ಸಮಾಜದ ಸೃಷ್ಟಿಯಾದ್ದರಿಂದ ಆ ಆಶಯವನ್ನೇ ಅವು ಮುಂದುವರಿಸುತ್ತವೆ. ಗಂಡಿನ ಲಿಂಗ ಎಂಬುದು ದೊಡ್ಡ ಅಧಿಕಾರದ, ನಿಗೂಢ ಶಕ್ತಿಯ ಸಂಕೇತವಾಗಿ ಬೆಳೆದು ಹೆಣ್ಣು ಅದಕ್ಕೆ ಮಣಿಯುವ, ತಟಸ್ಥಳಾಗಿ ಅದನ್ನೇ ಸ್ವೀಕರಿಸುವ ಪರವಶತೆ ಮುಖ್ಯವಾಗಿಬಿಡುತ್ತದೆ. ಈ ಹಿನ್ನೆಲೆಯಲ್ಲಿ ಪ್ರತಿಭಾ ತನ್ನ ಕವಿತೆಗಳಲ್ಲಿ ಫ್ಯಾಲಿಕ್ ಸಂಕೇತಗಳನ್ನು ಅತೀ ಶಕ್ತವಾಗಿ ಭಗ್ನಗೊಳಿಸುವುದು ವ್ಯಕ್ತವಾಗುತ್ತದೆ.

ಮಾತ್ರವಲ್ಲದೆ ಅವಕ್ಕೆ ಸಂಬಂಧಿಸಿದ ಅಧಿಕಾರ ಕೇಂದ್ರಗಳನ್ನು ನಿರಾಕರಿಸುವ ಹಿನ್ನೆಲೆಯಲ್ಲಿ ಕೆಲವೊಮ್ಮೆ 'ಹೆಣ್ಣೇ ಶಕ್ತಿಯ ರೂಪ'ವಾಗಿ ವಿಶ್ಲೇಷಿತವಾಗುವುದು ಕಂಡುಬರುತ್ತದೆ. ಹೀಗಾಗಿಯೇ ಇಲ್ಲಿನ ಕವನಗಳ ಲಿಂಗಸೂಚಕ ಪ್ರತಿಮೆಗಳು ಇಂದ್ರಿಯ ಸೂಚಕಗಳಾಗಿ ಸೀಮಿತಗೊಳ್ಳುವುದರ ಬದಲು ಅಧಿಕಾರ ಸೂಚಕ ಧ್ವನಿಯನ್ನು ಹೊಮ್ಮಿಸುತ್ತವೆ.

ಹೀಗೆ ಪ್ರತಿಭಾ ಅವರ 'ಮುನ್ನುಡಿ-ಬೆನ್ನುಡಿಗಳ ನಡುವೆ'ಯನ್ನು ವಿಶ್ಲೇಷಿಸುವ ಮೂಲಕ ತಾತ್ತ್ವಿಕ ಪ್ರಮೇಯ ಒಂದನ್ನು ಸೂಚಿಸಲು ಯತ್ನಿಸುತ್ತಿದ್ದೇನೆ. ಪುರುಷ ನಿಷ್ಠ ಬಂಡವಾಳಶಾಹೀ ಸಂಸ್ಕೃತಿ ಜತೆಗೆ ಸಮೃದ್ಧವಾಗಿ ವ್ಯಾಪಿಸುವ ಲೈಂಗಿಕ ರಾಜಕಾರಣದ ಗ್ರಹಿಕೆ, ಸಂಕೇತಗಳಿಗೆ ವಿರೋಧಿಯಾದ ರಚನೆಗಳು ಸಾಮಾನ್ಯವಾಗಿ ಹಲವಾರು ಮಹಿಳಾ ಕವಿಗಳ ಕವನಗಳಲ್ಲಿ ಕ್ರಿಯಾಶೀಲ ಪ್ರತಿಮೆಗಳಾಗಿ ಅನಾವರಣಗೊಂಡಿವೆ. ಮಾತ್ರವಲ್ಲದೆ ಹೆಣ್ಣು ಕ್ರಿಯಾಶೀಲೆ, ಸ್ವತಂತ್ರ ವ್ಯಕ್ತಿತ್ವ ಉಳ್ಳವಳೂ ಅಂತರ್‌ಜೀವನ ಉಳ್ಳವಳು ಎಂಬುದನ್ನು ಅವುಗಳು ಪರಿಣಾಮಕಾರಿಯಾಗಿ ನಿರೂಪಿಸುತ್ತವೆ. ಆದರೆ ಪ್ರತಿಮೆಗಳು ಮಾತ್ರ ಉಳಿದ ಮಹಿಳಾ ಕವಿಗಳಿಗಿಂತ ಭಿನ್ನವಾಗಿ ಏಕಕಾಲಕ್ಕೆ ಬಂಡವಾಳಶಾಹೀ ಸಂಸ್ಕೃತಿಯ ಲೈಂಗಿಕ ರಾಜಕಾರಣದ ಗ್ರಹಿಕೆ ಸಂಕೇತಗಳಿಗೆ ಪ್ರಧಾನ ಛಾಯೆ ಎಂದು ಕರೆಯಬಹುದಾದ ನವ್ಯದ ಹೆಣ್ಣಿನ ಕಾಮಕೇಂದ್ರಿತ ನಿರ್ವಚನಗಳಿಗೆ ಅತೀ ಪರಿಣಾಮಕಾರಿ ಪ್ರತಿಕ್ರಿಯೆ ನೀಡುವುದು ವ್ಯಕ್ತವಾಗುತ್ತದೆ. ಪ್ರತಿಭಾ ತನ್ನ ಕವಿತೆಗಳಲ್ಲಿ ವೈರುಧ್ಯದ ಮೂಲಕವೇ ಬಿಂಬಿಸುವ ತಾತ್ತ್ವಿಕತೆ ಅಂತಿಮವಾಗಿ ಲಿಂಗ ರಹಿತವಾದ ಹಾದಿಯೊಂದನ್ನು ರೂಪುಗೊಳಿಸುತ್ತದೆ.



'ಅರ್ಕ', ಶಾರದನಗರ, ಮಾಡೂರು,
ಕೋಟೆಕಾರು ಅಂಚೆ
ಮಂಗಳೂರು - ೫೭೫ ೦೨೨



# ಪ್ರತಿಭಾ ನಂದಕುಮಾರ್ ಕಾವ್ಯದ ಓದಿನ ಜೊತೆಗೆ

# ಒಂದಿಷ್ಟು ಪ್ರಶ್ನೆಗಳು




◆ ಎಸ್.ಎಸ್. ಶ್ರೀಧರಮೂರ್ತಿ

*"ಮೊದಲಿನಿಂದಲೂ ಅಷ್ಟೇ. ನಾನು ನನ್ನ ವಯಸ್ಸಿಗಿಂತ ಮನಸ್ಸಿನಲ್ಲಿ ಮುಂದಿದ್ದೆ. ನಾನು 'ನಾವು ಹುಡುಗಿಯರೇ ಹೀಗೆ' ಕವನ ಬರೆದಾಗ ಮದುವೆಯಿರಲಿ, ನನಗಿನ್ನು ಬಾಯ್‌ಫ್ರೆಂಡ್ ಕೂಡ ಇರಲಿಲ್ಲ. ಮದುವೆಗೆ ಮೊದಲೇ ಗೃಹಿಣಿ ಪದ್ಯಗಳು, ಬಸಿರಾಗುವ ಮೊದಲೇ ಮಕ್ಕಳ ಪದ್ಯಗಳು. ಇನ್ನೂ ನಲವತ್ತೈದು ಇದೇ ಈಗ ಆಗುತ್ತಿರುವಾಗ ಆಗಲೇ ಸಾವಿನ ಬಗ್ಗೆ ಪದ್ಯಗಳು ವಿಚಿತ್ರ ಅನ್ನಿ ಬೇಕಾದರೆ..."*

ಇದು ತಮ್ಮ 'ಆಹಾ ಪುರುಷಾಕಾರಂ' ಕವನ ಸಂಕಲನಕ್ಕೆ ಪ್ರತಿಭಾ ಅವರು ಬರೆದುಕೊಂಡಿರುವ 'ಕವಿತೆಗೆ ಕಾರಣ' ಎಂಬ ಭಾಗದ ಸಾಲುಗಳು. ಒಂದು ಅರ್ಥದಲ್ಲಿ ಇದು ಪ್ರತಿಭಾ ಕವಿತೆಯ ಓದಿಗೆ ಭೂಮಿಕೆ ಕಲ್ಪಿಸಬಹುದಾದ ವಾಕ್ಯಗಳಾದ್ದರಿಂದ ಇವುಗಳನ್ನು ಉದ್ಧರಿಸುವ ಮೂಲಕ ನನ್ನ ಲೇಖನ ಆರಂಭಿಸಿದ್ದೇನೆ. 'ಸಮಗ್ರ ಕಾವ್ಯ'ದ ಎತ್ತರವನ್ನು ಅವರ ಕಾವ್ಯ ತಲುಪಿರುವುದರಿಂದ ಗ್ರಹಿಕೆಗಳನ್ನು ನಿಖರಗೊಳಿಸಿ ಕೊಳ್ಳಲು ಇನ್ನೊಮ್ಮೆ ಅವರ ಕವಿತೆಗಳನ್ನು ಓದಿದೆ. ಒಂದು ಕಾಲದಲ್ಲಿ ಅಬ್ಬಾ ಗ್ರೇಟ್ ಅನ್ನಿಸಿದ ಕವಿತೆಗಳೆಲ್ಲ ಇಂದೇಕೆ ಸಪ್ಪೆ

ಅನ್ನಿಸುತ್ತಿವೆ ಅಥವಾ ಆಗ ಸರಳ ಅನ್ನಿಸಿದ ಕವಿತೆಗಳು ಈಗ ಸಂಕೀರ್ಣ ಎನ್ನಿಸುತ್ತಿರುವುದು ಏಕೆ ಎಂಬ ಪ್ರಶ್ನೆ ಕೇಳಿಕೊಳ್ಳುತ್ತಿರುವಾಗ ಈ ವಾಕ್ಯಗಳು ಸಿಕ್ಕವು. ಇದರ ಅರ್ಥವ್ಯಾಪ್ತಿ ಹೇಗೇ ಇರಲಿ, ಪ್ರತಿಭಾ ತಮ್ಮ ಅನುಭವಕ್ಕಿಂತ ಭಿನ್ನ ಭಾವಪಾತಳಿಯನ್ನು ನಿರ್ಮಿಸಿಕೊಳ್ಳಲು ಪ್ರಯತ್ನಿಸಿದ್ದರೆಂಬುದಂತೂ ಈ ಮಾತುಗಳಿಂದ ವೇದ್ಯ. ಆದರೆ ಆ ಭಾವಪಾತಳಿ ಅವರು ಏನಾಗಿಲ್ಲವೊ ಅದಲ್ಲ, ಏನಾಗಬೇಕೆಂದಿದ್ದರೋ ಅದು, ವಯಸ್ಸು-ಮನಸ್ಸುಗಳ ಸಮೀಕರಣ ಓದುವಿಕೆಯಲ್ಲಿ ಅದರಿಂದ ಅನುಭವಕ್ಕೇ ಬರುವುದಿಲ್ಲ. ಅಲ್ಲಿನ ಪ್ರಶ್ನೆಗಳೆಲ್ಲ ಅನುಭವಗಳ ನೆಲೆಗೆ ಜೋತುಬಿದ್ದವುಗಳಲ್ಲ. ಮೊದಲಿನಿಂದಲೂ ಪ್ರತಿಭಾ ಕಾವ್ಯಕ್ಕಿರುವ ಉದ್ದೇಶ ಒಂದೇ. ಹೆಣ್ಣಿನ ಅಂತರಂಗ ಪ್ರಪಂಚವನ್ನು ಅದರ ನೋವುಗಳೊಂದಿಗೆ ಬಿಚ್ಚಿಡಬೇಕು. ಹಾಗೆ ಮಾಡುವ ಮೂಲಕ ಪುರುಷ ಸಮಾಜವನ್ನು ಬೆಚ್ಚಿ ಬೀಳಿಸಬೇಕು. ಅವರ ಕವಿತೆಯಲ್ಲಿ ಈ ಪ್ರಯತ್ನಕ್ಕೆ ಬಳಕೆಯಾಗುವುದೆಲ್ಲ ನಾನು, ನೀನು, ಮಗ, ಮಗಳು, ಮುಂತಾದ ಸರ್ವನಾಮಗಳೇ. ಅವರ ಕವಿತೆಗಳ ಪರಿಕರಗಳೆಲ್ಲ ಖಾಸಗಿ ಪ್ರಪಂಚದ್ದಾದರೂ ಅದರ ಅಭಿವ್ಯಕ್ತಿ ಸಾರ್ವತ್ರಿಕ ನೆಲೆಯದು. ಮಾತ್ರವಲ್ಲ, ಇಲ್ಲಿ ಅವರು ಉದ್ದೇಶಿಸಿದ ಹೆಣ್ಣಿನ ಪ್ರಪಂಚ ಮತ್ತು ಅವರು ದ್ವೇಷಿಸುವ ಗಂಡಿನ ಪ್ರಪಂಚ ನಿರಂತರವಾಗಿ ಮುಖಾಮುಖಿಯಾಗುತ್ತ ಹೋಗುತ್ತದೆ. ಸಂಘರ್ಷದ ಪ್ರಮಾಣ ಹೇಗೇ ಇರಲಿ ಫಲಿತಾಂಶ ಒಂದೇ, ಹೆಣ್ಣು ಸ್ವಾತಂತ್ರ್ಯಕ್ಕೆ ತುಡಿಯುತ್ತಾಳೆ; ಗಂಡು ಸ್ವಾರ್ಥಿಯಾಗಿ 'ಪುರುಷಮೃಗ'ವಾಗಿ ಲೇವಡಿಗೆ ಒಳಗಾಗುತ್ತಾನೆ.

ಹೆಣ್ಣಿನ ಪ್ರೀತಿಗೆ ಹೆದರುವಷ್ಟು
ದ್ವೇಷಕ್ಕೆ ಗಂಡು ಹೆದರುವುದಿಲ್ಲ
(ಹಿಮದ ಹಾದಿ)

ಎಂಬ ಸಾಲುಗಳಂತೆ ಅವರ ಕವಿತೆಯಲ್ಲಿನ ಪುರುಷ ಸಮಾಜ ಹೆಣ್ಣಿನ ಪ್ರೀತಿಗೆ ಅನರ್ಹವಾಗಿ ಲೇವಡಿಗೆ ಒಳಗಾಗುತ್ತದೆ. ಇದು ಬಹಳ ಸ್ಪಷ್ಟವಾಗಿ ಏಕರೂಪದ ಕಾವ್ಯ.

ಪ್ರತಿಭಾ ಕಟ್ಟಿಕೊಡುವ 'ಅವಳ ಜಗತ್ತು' ಎಂತಹದು ಎನ್ನುವುದನ್ನು ನೋಡೋಣ. ಅವರ ಮೊದಲ ಕವಿತೆಯಲ್ಲೇ ಗಂಡನಲ್ಲಿ 'ಅವನನ್ನು' ಹುಡುಕುವ ಆದರೆ ಗಂಡನಿಗೆ ಅದರ ಸುಳಿವೂ ಸಿಗದಂತೆ ನಟಿಸುವ 'ಅವಳು' ಸಿಕ್ಕುತ್ತಾಳೆ. ಅವರ ಕವಿತಾ ಯಾತ್ರೆಯಲ್ಲಿ ಈ 'ಅವಳು' ಹಾಗೇ ಉಳಿದು ಬೆಳೆಯುತ್ತಾಳೆ. 'ಅಯ್ಯೋ ನಾವು ಗಂಡಾಗಲಿಲ್ಲವಲ್ಲ' ಎಂದು ಮಿಡುಕುತ್ತಲೇ ಅವನ ಪ್ರೀತಿಗೆ ಹಂಬಲಿಸುತ್ತಾಳೆ. ಅವಳ ಬೆನ್ನಿಗಿರುವ ಉದಾಹರಣೆ ನಡೆದಾಡುವ ಸ್ಮಾರಕವಾದ 'ಅಮ್ಮ', ಅಜ್ಜನಿಗಿಂತ ಸರಿದಾರಿಯಲ್ಲಿ ನಿಂತು ಹಿಂಬಾಲಿಸುವ ಅಜ್ಜಿ. ಇವರಿಗಿಂತ ಭಿನ್ನವಾಗಲು ಯತ್ನಿಸುವ ಅವಳಿಗೆ ಸಿಗುವುದು–

ಅವಸರದಲ್ಲಿ ನುಂಗುವ ಬಿಸಿ ಅನ್ನ ಸಾರು
ನಾಲಿಗೆ ಸುಟ್ಟು ಕಣ್ಣ ನೀರು...

ಎಂಬ ಮಾದರಿಯ ಪುಳಕ. ಅವನ ಜಗತ್ತು ಇವಳಿಗೆ ಸಂವಾದಿಯಾಗದೆ ಹೋದಾಗ 'ಚಿತ್ತದೊಳಗಿನ ಪುತ್ಥಳಿಗೆ' ಎಲ್ಲವನ್ನೂ ನಿವೇದಿಸಬೇಕೆಂಬ ಹಂಬಲ ಹುಟ್ಟುತ್ತದೆ. ಹೀಗಾಗಿ ಆ ಹುಡುಗಿ —

ಹರಿದು ಹೋದಳು ಹೊಳೆಯಲ್ಲಿ ಮೀನಾಗಿ
ಹರಡಿಕೊಂಡಳು ಸಾಕ್ಷಿಯ ಬಾನಾಗಿ
ತುಂಬಿಕೊಂಡಳು ಎದೆಯಲ್ಲಿ ಅಮೃತವಾಗಿ

ಇದಕ್ಕೆ ಪ್ರತಿಯಾಗಿ ಅವಳ ಹುಡುಗನೂ –

ಹರಿದು ಚಿಂದಿಯಾಗುವಂತೆ ಕಚ್ಚಿ ತಿಂದು
ನಿಮಿಷದಲ್ಲಿ ಜೀರ್ಣವಾಗುತ್ತಾನೆ

ಇಲ್ಲಿಂದ ಅವಳ ಜಗತ್ತು 'ಗೃಹಿಣಿ ಗೀತೆ'ಯಾಗಿ ಬೆಳೆಯುತ್ತದೆ. ಇಲ್ಲಿ ಶೇಕಡಾ ಇಪ್ಪತ್ತು ರಿಯಾಯಿತಿ ಸೀರೆ ಉಟ್ಟು ಘಮ್ಮೆನಿಸುವ ಸೋಪಿನಲ್ಲಿ ಮಿಂದು ಪ್ರೆಷರ್ ಬಾಣಲೆಯಲ್ಲಿ ಹುರಿದು ಎರಡೇ ನಿಮಿಷದಲ್ಲಿ ಸಿದ್ಧಪಡಿಸಿ ಗೊಂಬೆಯಂತಹ ಮಕ್ಕಳಿಗೆ ಉಣಬಡಿಸಬೇಕಾದ ಪ್ರಪಂಚ ಅವಳದು.

ಪ್ಯಾಕೇಟಿನ ಬಸುರಿಗೆ ಕತ್ತರಿ ಚುಚ್ಚಿ
ವಯಕ್ಕನೆ ವಾಂತಿ ಮಾಡುವ ಹಾಲು ಹಿಡಿದು
(ಕೇರ್ ಫ್ರೀ ಮಹಿಳೆಯರು)

ಯಾಂತ್ರಿಕವಾಗಿ ಬದುಕುವ ಅವಳ ಬದುಕಿನಲ್ಲೀಗ ನೆರಳು ಬೆಳಕಿನಾಟ ಈ ತೋರಿಕೆಯ ದಾಂಪತ್ಯ ಏಕೆ ಕೊನೆಗೊಳ್ಳುವುದಿಲ್ಲ? ಕತೆಗೇಕೆ ಮುಕ್ತಾಯವಿಲ್ಲ ಎಂಬ ಹತಾಶೆ ಒಂದು ಕಡೆ ಚಿಮ್ಮಿ ಬಂದರೆ ಇನ್ನೊಂದೆಡೆ ಅನುದಿನದ ಅಂತರಗಂಗೆ ಈಜುವಾಗ ತಾದಾತ್ಮ್ಯದ ಅಲೆಗಳು ನೆರವಾಗುತ್ತವೆ. ಈಗ –

ಅವನ ಭವಿಷ್ಯದಲ್ಲಿ ಅವಳಿಲ್ಲ
ಅವಳ ಚರಿತ್ರೆಯೊಳಗೆ ಅವನಿದ್ದಾನೆ
(ಕಥಾನಕ)

ಇಂತಹದೊಂದು ಪ್ರಯಾಣದಲ್ಲಿ ಅವನು ಪ್ರೀತಿ ದ್ವೇಷಗಳನ್ನೇ ವ್ಯಾಖ್ಯಾನಿಸಿದರೆ, ಅವಳು ಅವನನ್ನು ಅಷ್ಟು ಪ್ರೀತಿಸುವುದಕ್ಕೆ ತನ್ನನ್ನೇ ದ್ವೇಷಿಸುತ್ತಾಳೆ. ಪ್ರತಿಭಾ ಕಟ್ಟಿಕೊಡುವ ಈ ಜಗತ್ತು ಕನ್ನಡ ಸಾಹಿತ್ಯದ ಮಟ್ಟಿಗೆ ಅಪರೂಪದ್ದು ಎನ್ನುವಲ್ಲಿ ಅನುಮಾನವಿಲ್ಲ. ಆದರೆ, ಇದು ಸಂಪೂರ್ಣವಾದುದಲ್ಲ. ಇಲ್ಲಿ ಅವಳ ಜಗತ್ತಿನ ಕೊರತೆಗಳೇ ಮುಖ್ಯವಾಗುತ್ತ ಬಂದಿವೆ. ಅವನೊಡನೆ ಸಂವಾದವೇ ಸಾಧ್ಯವಾಗುತ್ತಿಲ್ಲ. ಇಂತಹದೊಂದು ನಿರ್ಭಾವುಕ ಸ್ಥಿತಿ ವಾಸ್ತವವೇನೂ ಅಲ್ಲ. ಅದರಲ್ಲಿ ಆಧುನಿಕ ಸಂವೇದನೆಗಳ ಹಿನ್ನೆಲೆಯಲ್ಲಿ ನೋಡುವಾಗ ಅವಳ ಜಗತ್ತಿನ ಆನಂದಗಳೂ ಸಾಪೇಕ್ಷವಾಗಿಯಾದರೂ ಮೂಡಿಬಂದಿಲ್ಲ ಎಂಬ ಪ್ರಶ್ನೆಗೆ ಪೂರ್ತಿ ಇಲ್ಲ ಅನ್ನಲಾಗದಿದ್ದರೂ ಅದರ ಪ್ರಮಾಣ ಕಮ್ಮಿ. ಇದರಿಂದ ಪ್ರತಿಭಾ ಕಾವ್ಯ ಒಂದು ವಾಸ್ತವದ ನೆಲೆಗಟ್ಟಿನಿಂದ ದೂರವಾಗಿ ಮುಖರಹಿತ ಸ್ಥಿತಿಯ ಭಾವುಕತೆಯನ್ನೇ ನೆಚ್ಚಿಕೊಂಡು ಬಂದಿದೆ. ಇಲ್ಲಿ ಹೆಣ್ಣಿನ ಪ್ರತ್ಯೇಕತೆಯನ್ನು ಗುರುತಿಸುವ ಪ್ರಯತ್ನಗಳು ಆ ಕಾರಣಕ್ಕೇ ತಾತ್ವಿಕ ಆಯಾಮ ಪಡೆಯದೇ ಹೋಗುತ್ತವೆ. ನಿರಾಕರಣೆಯ ಮಟ್ಟಿಗೆ ಅವರ ಕಾವ್ಯವನ್ನು ಮೆಚ್ಚಿಕೊಂಡಾಗಲೀ, ಪರ್ಯಾಯವನ್ನು ಸಹಜ ಎಂದು ಒಪ್ಪಿಕೊಳ್ಳಲಾಗುವುದಿಲ್ಲ. ಇದು ಪ್ರತಿಭಾ ಕಾವ್ಯ ಸದಾ ಎದುರಿಸುತ್ತಾ ಬಂದ ಬಿಕ್ಕಟ್ಟು.

ಪ್ರತಿಭಾ ಕಾವ್ಯದ ಬಹುಭಾಗ ಇಂತಹದೊಂದು ಮುಖರಹಿತ ಭಾವುಕತೆಯನ್ನೇ ನೆಚ್ಚಿಕೊಂಡಿದ್ದರೂ ಅವರಲ್ಲಿ ಪರ್ಯಾಯದ ಭರವಸೆಯ ಸಾಧ್ಯತೆಯಾಗಿ ಮುಂದಿನ ಪೀಳಿಗೆಯ ಚಿತ್ರಣ ಬಂದಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಮಗಳು, ಅವಳು ಸಾಧಿಸಲಾಗದ್ದನ್ನು ಸಾಧಿಸುತ್ತಾಳೆ ಎಂಬುದೊಂದು ಭರವಸೆಯ ಮಿಂಚು. ಅದನ್ನು ಹಿಡಿದೇ ಅವಳು ನಾಳೆಗಳನ್ನು ನೋಡುತ್ತಿದ್ದಾಳೆ.

ನನ್ನ ಮಗಳು
ಅವಳ ತಂದೆಗೆ ದಬಾಯಿಸಿದ ದಿನ
ನಾನು ಹೋಳಿಗೆ ಮಾಡಿದೆ (ಇಷ್ಟ)

ಎಂಬ ಸಂಭ್ರಮ ಅವರಲ್ಲಿ ಪದೇಪದೇ ಕಾಣುತ್ತದೆ. ''ನಾನು ಪುಟ್ಟಿ ಮಳೆ ನೋಡಿದ್ದು'' ಇಂತಹ ಭೂಮಿಕೆಗೆ ಪ್ರಾತಿನಿಧಿಕವಾದ ಕವಿತೆ. ಇಲ್ಲಿ ನಿರೂಪಕಿ ತನ್ನ ಮಗಳ ಜೊತೆ ಹೊರಗೆ ಬೀಳುತ್ತಿರುವ ಮಳೆಯನ್ನು ನೋಡುತ್ತಿದ್ದಾಳೆ. ಮೊದಲ ಸಾಲುಗಳು 'ಹೂಪಕಳೆ', 'ಗಂಟು' ಎರಡನ್ನೂ ಸೂಚಿಸಿ ಇವರಿಬ್ಬರ ಕೈಗಳಲ್ಲಿನ ಬದಲಾವಣೆ ಹೇಳುತ್ತಲೇ ಭಾವನೆಗಳನ್ನು 'ಜೋಡಿ' ಎಂದು ಸೂಚಿಸಿ, ಇವರಿಬ್ಬರಲ್ಲಿನ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಸೂಚಿಸುತ್ತದೆ. ಇದು ನಿರೂಪಿಸಿ ಕೊಡುವ ಚಿತ್ರಗಳು ಎರಡು. ಒಂದು ನಿರೂಪಕಿ ಅವಳ ಅಮ್ಮನ ಜೊತೆ ಮಳೆ ನೋಡುವಾಗ ಬಿದ್ದ ತುಂತುರು ಹನಿ, ಮಳೆ ನೀರು ಅಮ್ಮನ ಕಣ್ಣೀರೂ ಎಂದು ತಿಳಿಯದೆ ಅಮ್ಮನ ಕೈಹಿಡಿದದ್ದು, ಇನ್ನೊಂದು 'ಋತುಚಕ್ರ'ದ ಉರುಳಿನ ನಂತರ ಮತ್ತೆ ಮಳೆ ನೋಡುತ್ತಿರುವ ನಿರೂಪಕಿ ಮಗಳು ಹೆದರಿ ಅಮ್ಮನ ಕೈ ಹಿಡಿದಿಲ್ಲ. ತಂದೆ ನೆರಳಿನಿಂದ ಆವರಿಸಲ್ಪಟ್ಟಿಲ್ಲ. ಒಲೆ ಬದಲಾದರೂ ಉರಿ ಬದಲಾಗುವುದೇ ಎಂಬ ಮಾತಿಗೆ ಆಗುತ್ತದೆ ಎಂಬ ಭರವಸೆಯ ಉತ್ತರ ಬಂದಿದೆ. ಅವಳ ಜಗತ್ತು ಅವಳ ಅಮ್ಮನ ಮತ್ತು ಅಜ್ಜಿಯ ಜಗತ್ತಿಗಿಂತ ಬೆಳೆದಿದೆ. ಮಗಳ ಜಗತ್ತು ಇನ್ನೂ ಬೆಳೆಯುತ್ತದೆ ಎಂಬ ಭರವಸೆ ಇದೆ. ಈ ನೆಲೆಯಲ್ಲಿ ನೋಡಿದಾಗ ಪ್ರತಿಭಾ ಕಾವ್ಯದಲ್ಲಿ ಚಿಂತನಶೀಲತೆ ಇದ್ದರೂ, ಅವರದು ಮೂಲತಃ ಭಾವುಕತೆ ತುಂಬಿದ ಕಾವ್ಯ ಹೀಗಾಗಿ ಅವರ 'ಅವಳ ಜಗತ್ತು' ಕಟ್ಟಿಕೊಡುವ ತುಡಿತ ಪ್ರಾಮಾಣಿಕವಾಗಿದ್ದರೂ ಈ ಭಾವುಕತೆ ಪ್ರಚಲಿತ ಜನಪ್ರಿಯ ಗ್ರಹಿಕೆಗಳನ್ನು ಒಡೆದು ನೋಡಲು ತೊಡಕಾಗಿದೆ. ಜನಪ್ರಿಯ ಸ್ತ್ರೀವಾದಿ ಚಿಂತನೆಯ ಮುಖ್ಯಲಕ್ಷಣವೆಂದರೆ, ಪುರುಷನನ್ನು ಆಕ್ರಮಣಶೀಲನೆಂದು, ಮತ್ತು ಹೆಣ್ಣನ್ನು ಆಕ್ರಮಣಕ್ಕೆ ಒಳಗಾದ ಮುಗ್ಧಳೆಂದು ನಂಬುವುದು. ಗಂಡಿನ ಕ್ರೌರ್ಯವನ್ನು ತನ್ನ ಮುಗ್ಧತೆ ಎಂದು ಪ್ರತಿಪಾದಿಸಿಕೊಳ್ಳುವುದು; ಎಲ್ಲವನ್ನೂ 'ನನ್ನ' 'ಅನ್ಯ' ಎಂಬ ಭೇದ ಕಲ್ಪನೆಯಲ್ಲೇ ನೋಡುವ ಕಾವ್ಯಕ್ಕೆ ಚಿಂತನಶೀಲತೆಯ ಗಟ್ಟಿತನವನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಪ್ರತಿಭಾ ಕಾವ್ಯದ ಕೃತಕ ಲಯಗಾರಿಕೆ ಮತ್ತು ಅತಿ ವಾಚಾಳಿತನ ಈ ಟೊಳ್ಳುತನಕ್ಕೆ ಪೂರಕವಾಗಿದೆ. ಅವರ ಬಹುತೇಕ ಕವಿತೆಗಳು ಆಕ್ರಮಣವನ್ನು ಕುರಿತು ಹುಸಿ ಚಿತ್ರಣಗಳಲ್ಲೇ ತೃಪ್ತವಾಗಿವೆ. ಈ ಆಕ್ರಮಣದ ಹಿಂದಿನ ರಾಜಕೀಯದ ಕುರಿತು ಗಂಭೀರ ಪ್ರಶ್ನೆಗಳನ್ನು ಹುಟ್ಟುಹಾಕುವುದಿಲ್ಲ. ಪುರುಷ ಶೋಷಣೆ ಕುರಿತ ಏಕರೂಪಿ ಗ್ರಹಿಕೆಗಳನ್ನು ತಲಸ್ಪರ್ಶಿ ವಿಶ್ಲೇಷಣೆಗಳಿಲ್ಲದೆ ಒಪ್ಪುವುದು ಕಷ್ಟವಾಗುತ್ತದೆ. ವ್ಯಂಗ್ಯವೆಂದರೆ ಬದುಕಿನ ವೈರುಧ್ಯವನ್ನು ಕುರಿತ ಅವರ ಕವಿತೆಗಳಿಗಿಂತ ಹಸಿ ಲೈಂಗಿಕ ಚಿತ್ರಣಗಳನ್ನು ಒಳಗೊಂಡ ಅವರ ಕವಿತೆಗಳು ಹೆಚ್ಚು ಜನಪ್ರಿಯವಾಗಿದ್ದು. ಇದೂ ಕೂಡ ಅವರ ಕಾವ್ಯದ ಸಮಸ್ಯೆಯಾಗಿದೆ.

ಆದರೆ ಪ್ರತಿಭಾ ಲೈಂಗಿಕತೆಯನ್ನು ಕುರಿತು ಬರೆದ ಕವಿತೆಗಳಿಗೆ ಚಿಪ್ಪನ್ನು ಒಡೆದು ಬರುವ ವಿಚಿತ್ರ ಶಕ್ತಿಯಿದೆ. ಜನಪ್ರಿಯ ಪ್ರಣಾಳಿಕೆಗೆ ಸಿಕ್ಕ ಕಾವ್ಯವೇ ತನಗಾದ ಗಾಯಗಳನ್ನು ತೋರಿಸುತ್ತದೆ. ಲೈಂಗಿಕ ಚಿತ್ರಣಗಳನ್ನು ಢಾಳಾಗಿ ನೀಡುವ ಮೂಲಕವೇ ಕೆಲವೆಡೆ ಪ್ರತಿಭಾ ಅವರಿಗೆ ಗಾಢ ವಿಷಾದವನ್ನು ಕಟ್ಟಿಕೊಡಲು ಸಾಧ್ಯವಾಗಿದೆ. ಪ್ರಕೃತಿ ಸಹಜ ಆಕರ್ಷಣೆಯನ್ನು ತಾನೇ ಭಗ್ನಗೊಳಿಸಿಕೊಂಡು ಹುಟ್ಟಿದ್ದು ಅಸಮ ಲೈಂಗಿಕ ತೃಪ್ತಿಯ ಚಿತ್ರಣಗಳು. ಇವು ಪ್ರತಿಭಾ ಅವರ ಅವಳ ಜಗತ್ತಿಗೆ ವಿರುದ್ಧ ನಿಂತು ಮಾತನಾಡುತ್ತವೆ. ಅವರ ಕವಿತೆಗಳಲ್ಲಿ ಹೀಗೆ ಪರಸ್ಪರ ನಡೆದ ವಾಗ್ವಾದ ಬಹು ವಿಶಿಷ್ಟವಾದದ್ದಾಗಿದೆ. ಅವರ ಕಾವ್ಯ ವ್ಯಂಗ್ಯದಲ್ಲೇ ಬೆಳೆಯುತ್ತದೆ. ತಂದೆತನದ ಹಮ್ಮು ಒಂದು ವೀರ್ಯಕ್ಕೆ ಸೀಮಿತವೆಂದು ಹಂಗಿಸಿರುವುದು ವಾಸ್ತವ ಕೂಡ ಹೌದು. ಪುರುಷ ಅಪೇಕ್ಷಿಸಿದ ಸ್ತ್ರೀ ಕಾವ್ಯದ ರೊಮ್ಯಾಂಟಿಕ್ ಮುಸುಗನ್ನು ಕಿತ್ತು ಹಾಕಿದ್ದು ಪ್ರತಿಭಾ ಅವರ ದೊಡ್ಡ ಸಾಧನೆ ಎಂದು ಹೇಳಬಹುದು. ಆದರೆ ಅದಕ್ಕೆ ಅವರು ತಂದಿಟ್ಟಿರುವ ಪರ್ಯಾಯಗಳ ಜಗತ್ತು ಕೂಡ ಪುರುಷ ಜಗತ್ತನ್ನು ತಣಿಸುವಂತೆ ಇದೆ ಎನ್ನುವುದೇ ನನ್ನ ವಿಷಾದ.

'ಒಂದು ಸಲ ನನ್ನ ಕವಿ ಮಿತ್ರನೊಬ್ಬ, ನಾನು ಪದಗಳ ಸಂವೇದನಾಶಕ್ತಿ (sensuousaue)ಯನ್ನು ತೆಗೆದು ಹಾಕಿ ತುಂಬಾ Clinical ಆಗಿ ಬರೆಯುತ್ತೇನೆ ಅಂತ ದೂರಿದ. ಹೆಂಗಸರು ಮೊಲೆ, ಸಂಭೋಗ ಇಂತಹ ಪದಗಳನ್ನು 'ಲೀಲಾಜಾಲ'ವಾಗಿ ಬಳಸಬಾರದಂತೆ. ಇದರಿಂದ ಆ ಪದಗಳ ರೋಚಕತೆ ಕಳೆದುಹೋಗುವುದಂತೆ. 'ನನ್ನ ಉದ್ದೇಶ ಅದೇ' ಅಂದೆ; ಅಂದರೆ ಹಳೆಯ ಪುರಾತನ ರೋಲ್ ಮಾಡೆಲ್‌ನಿಂದ ಹೊರಬಂದು ಅಭಿವ್ಯಕ್ತಿಗೆ ಹೊಸ ಆಯಾಮ ನೀಡುವುದು.''

ಎಂದು ಪ್ರತಿಭಾ ಹೇಳಿಕೊಂಡಿದ್ದಾರೆ. ಇದು ಎಷ್ಟರಮಟ್ಟಿಗೆ ನಿಜ ಎಂದು ಅವರ ಕಾವ್ಯ ನೋಡಿದಾಗ ಅಂತಹ ಸಾಧ್ಯತೆಗಳೇನೂ ಕಾಣುವುದಿಲ್ಲ. ಎಷ್ಟೋ ಕಡೆ ಅವರು ಅಗತ್ಯಕ್ಕಿಂತ ಹೆಚ್ಚು ವಿವರಗಳನ್ನು ದಾಖಲಿಸಿದ್ದಾರೆ. ಆ ಮೂಲಕವೇ ಪುರುಷ ಕಣ್ಣುಗಳನ್ನು ತಣಿಸಲು ಯತ್ನಿಸಿದ್ದಾರೆ. ಉದಾಹರಣೆಗೆ 'ಮಹಾ ನಿರ್ಗಮನ' ಕವಿತೆಯ ಈ ಸಾಲುಗಳನ್ನು ಗಮನಿಸಿ.

ಅವಳು ತನ್ನವಳಾದಷ್ಟು ತಾನು ಅವಳವನಲ್ಲ
ತನ್ನ ವೀರ್ಯದ ಆತ್ಮಕ್ಕೆ ಸಾಟಿಯೇ ಅವಳ ಬಸಿರ ಕಾಮ
ಬೆದೆಗೆ ಬಂದವಳನ್ನು ಬಲೆಗೆ ಸಿಕ್ಕಿಸಿ ಉಜ್ಜಿ ಸಿಪ್ಪೆ ಸಿಗಿದು
ಕತ್ತರಿಸಿ ಬಾಂಡಲೆಯಲ್ಲಿ ಮಸಾಲೆ ಸಹಿತ ಹುರಿದು
ಕರುಳ ತುಡಿತಕ್ಕೆ ಬಲಿಕೊಟ್ಟು ಬಾಯೊಡ್ಡಿ ಚಪ್ಪರಿಸಿ ತೇಗಿ ಆಹಾ
ಜೋತ ಮೊಲೆ ಸೋತ ತುಟಿಯ ಪುಳಕವೇನು ಮಹಾ
ಎಂದು ಹಂಗಿಸಿ ನಿಗುರಿಸಿದ ಶಿಶ್ನದಿಂದ ತಿವಿದು ಮೂತಿ
ಎದೆಯ ಫಲದ ಬೆಳೆ ಕಿತ್ತು ಕೊಟ್ಟವಳು
ಉಪ್ಪರಿಗೆಯವಳಿಗಿಂತ ಮಿಗಿಲಲ್ಲ
ಕಾದವಳ ಕಾಯದ ಕಿಮ್ಮತ್ತು ಭಾರಿಯಲ್ಲ
ಬರಿ ತೊಗಟೆ ಇವಳು ಅವಳು ಮುಖಮಲ್ಲು
.........................................
.......................................
ಬಸಿರ ಕಥಾನಕದಲ್ಲಿ
ಏನೀಗ ಎದ್ದು ಹೋದರೆ?
ಯೋನಿಗೆ ಅಪಚಾರವಾದರೆ
ಉನ್ಮತ್ತ ಮೊಲೆ ತೊಟ್ಟು ಬಿಟ್ಟು ನಡೆದರೆ.

ಈ ಕವಿತೆಯ ವಸ್ತು, ಉದ್ದೇಶ ಎರಡೂ ಚೆನ್ನಾಗಿದ್ದರೂ ಈ ವಿವರಗಳು ಉದ್ದೇಶವನ್ನು ಹದಗೆಡಿಸಿವೆ. ಈ ವಿವರಗಳಿಂದ ಅಭಿವ್ಯಕ್ತಿಗೆ ಹೊಸ ಆಯಾಮ ಬರುವುದಕ್ಕಿಂತ ಋಣಾತ್ಮಕ ವಾಚ್ಯತೆ ಬಂದು ಬಿಟ್ಟಿದೆ. ಕ್ಯಾಬರೆ ನೋಡಿ ಆನಂದಿಸುತ್ತಾ ಅವಳ ಬದುಕಿನ ದುರಂತಕ್ಕೆ ಮರುಗುತ್ತಿದ್ದೇವೆ ಎಂದು ಹೇಳಿದರೆ ನಂಬಬಹುದೇ? ಅದೇ ರೀತಿ ಈ ವಿವರಗಳ ಮಾರ್ಗ ಪ್ರತಿಭಾ ಕಾವ್ಯಕ್ಕೆ ಸಿಗಬಹುದಾಗಿದ್ದ ಓದನ್ನು ಕಳೆದುಕೊಳ್ಳುವಂತೆ ಮಾಡಿದೆ. ನನಗೆ ಬಹಳ ಇಷ್ಟವಾದ, ಕನ್ನಡದಲ್ಲಿ ನಿಜವಾದ ಫೆಮಿನಿಸ್ಟ್ ಕವಿತೆ ಎಂದು ಮೆಚ್ಚಿಕೊಂಡ 'ರಾಸಕ್ರೀಡೆ ಮತ್ತು ನಂತರ' ಕವಿತೆ ಬಗೆಗೂ ನನಗಿರುವುದು ಇದೇ ತಕರಾರು. ಸ್ತ್ರೀ ಲೈಂಗಿಕತೆ ಎನ್ನುವುದು ಕನ್ನಡದಲ್ಲಿ ಈ ಕವಿತೆಯಲ್ಲಿ ವ್ಯಕ್ತವಾದಂತೆ ಬಂದಿರುವುದು ವಿರಳ. ''ಅವನು ಗಾಢ ನಿದ್ದೆಗಿಳಿದ, ಅವಳು ಇಲ್ಲ'' ಎನ್ನುವವರೆಗೂ ಕವಿತೆ ಸಹಜವಾಗೇ ಬಂದಿದೆ. ಆದರೆ—

ದಾಳಿಗೆ ಹೈರಾಣಾಗಿ ಪವಡಿಸಿದ್ದ ಅವಳ ಪೃಷ್ಠಕೆಂದು
ಕೈಕೊಟ್ಟು ಸೆಳೆಯುವಂತೆ ಈಗಲೇ ಇನ್ನೆರಡು ಕ್ಷಣಗಳಲ್ಲಿ
ಮತ್ತೆ ತೊಡಗುವವನಂತೆ ರಾಸಕ್ರೀಡೆಗೆ

ಎಂಬ ಸಾಲುಗಳು ಈ ಸಹಜತೆ ಚದುರುವಂತೆ ಮಾಡಿವೆ. ಅಲ್ಲಿಂದ ಮುಂದೆ 'ಹೊರಳಿದಳು ಭೂಮಿ ತಾಯಿ' ಎಂಬ ಸೊಗಸಾದ ಪ್ರತಿಮೆ ಪರಿಣಾಮವನ್ನು ಕಳೆದುಕೊಂಡಿದೆ. ಕವಿತೆ ಎನ್ನುವಲ್ಲಿ ವಿವರಗಳು ಇಷ್ಟು ಥಾಳಾಗಿ ಏಕೆ ಬರಬೇಕು? ಓದುಗ ಇವನ್ನೆಲ್ಲ ಗ್ರಹಿಸಿಕೊಳ್ಳಲಾರನೇ ಎಂಬುದು ನನ್ನನ್ನು ಕಾಡುತ್ತಿರುವ ಪ್ರಶ್ನೆ. ಇದನ್ನು ಅನುಲಕ್ಷಿಸಿ ಪ್ರತಿಭಾ ಕವಿತೆಯೊಂದರ ಸಾಲುಗಳು ಹೀಗಿವೆ —

ಹಾಗಾದರೆ ಎಷ್ಟು ಸುಲಭ ಹೆಣ್ಣು ಗಂಡಿನ ಕೆಲಸ!
ದಿನದಿನದ ಭೇಟಿ, ಲಲ್ಲೆ ಮಾತಿನ ಥಾಟಿ, ಕೊಸರು ಕೊಸರುವ
ಬಳುಕಿನಾಟ ಬರಿ ರಸ್ತೆಗೆ ಕಾರಿಗೆ ಟಾಕೀಸಿಗೆ ನಡುರಾತ್ರಿಯ ವಿದಾಯಕ್ಕೆ
ಪುಳಕಕ್ಕೆ ತನು ಕರಗಿ ಒದ್ದೆ ಚಡ್ಡಿಯಲ್ಲಿ ಬಾಯೊಣಗಿ ಮರಳಿ ಬಂದರೆ ಮನೆಗೆ
ದೀರ್ಘ ರಾತ್ರಿಯ ಒಂಟಿ ಹಾಸಿ ಹೊದೆಯಲು ಅದೇ ಗಂಡು ವಾಸನೆಯ ಚಾದರ
ಅನ್ನಬಹುದೇ ಇದು ಹಾದರ?

ಗಂಡು-ಹೆಣ್ಣಿನ ಸಂಬಂಧ ಲೈಂಗಿಕತೆಯಷ್ಟೇ ಅಲ್ಲ ಎಂಬ ಎಚ್ಚರ ಅವರ ಕಾವ್ಯಕ್ಕಿದೆ. ಆದರೆ ಅದು ಅಷ್ಟಕ್ಕೇ ಸೀಮಿತವಾಗುತ್ತಿದೆ ಎಂಬ ವಿಷಾದವೂ ಇದೆ. ಇವನ್ನೆಲ್ಲ ತಾತ್ವೀಕರಿಸಿಲ್ಲ ಎನ್ನುವಾಗ ನಾನು ಇವುಗಳು ತತ್ವಗಳಿಗೆ ನಿಷ್ಠವಾಗಿಲ್ಲ ಎನ್ನುತ್ತಿಲ್ಲ. ಅವರ ಕಾವ್ಯದುದ್ದಕ್ಕೂ ಪ್ರವಹಿಸುವ ತಾತ್ವಿಕತೆ ಸಿದ್ಧಾಂತಗಳ ಹಂಗಿಲ್ಲದೆ ಬೆಳೆದಿದ್ದು, ಅದಕ್ಕೆ ಗಟ್ಟಿತನ ಕೂಡ ಇದೆ. ಮೂಲಭೂತ ಪ್ರಶ್ನೆಗೆ ಬಂದರೆ ಸಮಸ್ಯೆ ಇರುವುದು ಅಭಿವ್ಯಕ್ತಿಯಲ್ಲಿ. ಸಂವಹನಶೀಲತೆಯ ಅಗತ್ಯವಂತೂ ಮುಖ್ಯವಾದದ್ದು ಎಂದು ಒಪ್ಪಿಕೊಂಡರೂ, ನಿಯತ ಲಯದಿಂದ ಹುಟ್ಟುವ ಮಿತಿಗಳ ಮಾತನ್ನು ಒಪ್ಪಿಕೊಂಡರೂ ಗದ್ಯದ ವಾಚಾಳಿತನವೇ ಕಾವ್ಯಗುಣವಾದರೆ ಕಾವ್ಯದ ಪ್ರತ್ಯೇಕತೆ ಎಲ್ಲಿ ಉಳಿಯುತ್ತದೆ ಎನ್ನುವುದೊಂದು ಮುಖ್ಯವಾದ ಪ್ರಶ್ನೆ. ಓದುಗರಿಗೆ ಎಲ್ಲವನ್ನೂ ಹೇಳಿಬಿಡುವ ಕಾವ್ಯ ತನ್ನ ಅತಿ ಉತ್ಸಾಹದಿಂದಲೇ ನಿರಾಶೆ ಹುಟ್ಟಿಸುತ್ತದೆ. ಪ್ರತಿಮೆಗಳಲ್ಲಿ ಮಾತಾಡಿದರೆ ಹೇಳಬೇಕಾದ್ದು ಮುಟ್ಟುವುದೋ ಇಲ್ಲವೋ ಎಂಬ ಭಯ ಅವರಿಗಿದ್ದಂತಿದೆ.

ಪ್ರತಿಮೆಯಲ್ಲಿ ಬರೆದರೆ ತಿಳಿಯುವುದಿಲ್ಲವಂತೆ
ನೇರವಾಗಿ ಬಿಚ್ಚಿಕೊಂಡರೆ ಅರ್ಥವಾಗುವುದಂತೆ
ಬಿಚ್ಚಿ ಬಿಚ್ಚಿದಾಗ ನೀವು ಎಲ್ಲಿ ಬಿಚ್ಚಿಟ್ಟುಕೊಂಡಿದ್ದೆ (ಎಲ್ಲಿದ್ದೆ)

ಕಾವ್ಯ ಪ್ರತಿಮೆಗಳಲ್ಲಿ ಮಾತಾಡಿದರೆ ಅಸ್ಪಷ್ಟವಾಗುತ್ತದೆ ಎನ್ನುವಂತೆ, ನೇರವಾಗಿ ಮಾತನಾಡಿದಾಗ ಕಸಿವಿಸಿ ಹುಟ್ಟಿಸುತ್ತದೆ. ಇದು ಕಾವ್ಯ ಮೀಮಾಂಸೆಯ ಬಹುಮುಖ್ಯ ಸಮಸ್ಯೆ ಕೂಡ ಹೌದು. ಕುತೂಹಲಕರ ಸಂಗತಿ ಎಂದರೆ ಪ್ರತಿಭಾ ಅವರ ಕವಿತೆಗಳಲ್ಲಿ 'ಕವಿತೆ' ಎನ್ನುವ ಪರಿಕಲ್ಪನೆ ಬಗ್ಗೆಯೇ ಅನೇಕ ಕವಿತೆಗಳಿವೆ. ಮಾಧ್ಯಮದ ಶಕ್ತಿ ಮತ್ತು ಸಾಧ್ಯತೆ ಬಗ್ಗೆ ಅವರು ಚಿಂತಿಸುತ್ತಾ ಬಂದಿದ್ದಕ್ಕೆ ಇದು ನಿದರ್ಶನವಾಗಿದೆ. ಎ.ಕೆ. ರಾಮಾನುಜನ್, ಲಂಕೇಶ್, ನರಸಿಂಹಸ್ವಾಮಿ ಮುಂತಾದವರ ಕಾವ್ಯದ ಸಾಧ್ಯತೆಯನ್ನು ಅರ್ಥಪೂರ್ಣವಾಗಿ ಬಳಸಿಕೊಂಡಿರುವ ಅವರಿಗೆ ಅಭಿವ್ಯಕ್ತಿಯ ತೊಡಕು ಸದಾ ಕಾಡುತ್ತಾ ಬಂದಿರುವ ಸಮಸ್ಯೆಯಾಗಿದೆ.

ಕವಿತೆಗೆ ಗೊತ್ತಿರುವುದು
ಹೋದಲ್ಲಿ ತಳವೂರುವುದು
ಕರೆದರೆ ಬಾರದಿರುವುದು

(ಕವಿತೆ – ೫)

ಎಂದು ಬಲ್ಲ ಅವರಿಗೆ ಅದರ ಮಾಂತ್ರಿಕತೆಯ ಪರಿಚಯವೂ ಇದೆ. ಹೀಗಾದರೆ ಇಂತಹ ಸಮಸ್ಯೆ ಹೇಗೆ ಉಂಟಾಯಿತು? ಅಥವಾ ಅದು ಕಾವ್ಯದ ಇನ್ನೊಂದು ಸಾಧ್ಯತೆಯೇ ಇವೆಲ್ಲ ನನ್ನಲ್ಲಿ ಉತ್ತರ ದೊರೆಯದೇ ಉಳಿದುಕೊಂಡಿರುವ ಪ್ರಶ್ನೆಗಳು. ಪ್ರತಿಭಾ ಅವರ ಕವಿತೆಗಳಲ್ಲೇ 'ಕನಸು ಕಸಿವಿಸಿಯ ಜಾಡು' ಎಂಬ ಕವನ ಸಿಕ್ಕುತ್ತದೆ. ಇದು ಹೆಣ್ಣಿನ ವಿಶಿಷ್ಟ ಅನುಭವವಾಗಿದೆ. ಆದರೆ ಎಲ್ಲೂ ವಾಚ್ಯವಾಗುವುದಿಲ್ಲ, ಹೀಗೆಂದೂ ಒಗಟುಗಳಲ್ಲೇ ಉಳಿಯುವುದಿಲ್ಲ. ಇಂತಹದೊಂದು ಸಾಧ್ಯತೆ ಪ್ರತಿಭಾ ಅವರ ಉದ್ದೇಶವನ್ನು ಪರಿಣಾಮಕಾರಿಯಾಗಿ ಈಡೇರಿಸುತ್ತದೆ ಎಂದು ನಾನು ಭಾವಿಸುತ್ತೇನೆ.

ಕನ್ನಡಿಯೊಳಗಿನ ಗಂಟು
ಗುಲಾಬಿ ಮುಳ್ಳು ಚುಚ್ಚಿ
ಬುಡಕ್ಕೆ ಕೊಡಲಿ...

(ಕಮಲಾಹಾಸನಿಗೆ)

ಯಂತಹ ಪ್ರತಿಮೆ ಸಂಕೀರ್ಣವಾಗದೆ ಸಾಕಷ್ಟನ್ನು ಹೇಳುವುದಿಲ್ಲವೆ? ಭಾಷೆ ಕೆಲವನ್ನು ಪಾತಳಿಯ ಬೇರೆ ಬೇರೆ ನೆಲೆಗಳಲ್ಲಿ ನಿಲ್ಲಿಸಿಕೊಳ್ಳದೆ ಹೋದರೆ ಸೂಕ್ಷ್ಮತೆಯನ್ನು ಹೇಗೆ ಉಳಿಕೊಳ್ಳುತ್ತದೆ? ಗಂಡು-ಹೆಣ್ಣಿನ ಸಂಬಂಧ ಅತ್ಯಂತ ಆರೋಗ್ಯಕರವಾಗಿರುವುದು ಕನಸಿನ ರಾಜ್ಯದಲ್ಲಿ ಮಾತ್ರ ಸಾಧ್ಯವೇನೊ, ಬಿರುಕು ಇರುವುದು ನಿಜ. ಒಂದು ಕಾಲದಲ್ಲಿ ಗಂಡಿನೊಂದಿಗೆ ನಾಲ್ಕು ಮಾತನಾಡಿದರೆ, ಐದನೆಯದು ಮದುವೆಯಲ್ಲೇ ಮುಗಿಯಬೇಕು ಎನ್ನುವ ಸ್ಥಿತಿಯಿಂದ ಗಂಡು-ಹೆಣ್ಣಿನ ಸಂಬಂಧ ಲೈಂಗಿಕತೆಯ ಬಿಂದು ದಾಟಲಾರದು ಎನ್ನುವ ಸ್ಥಿತಿಗೆ ನಾವು ತಲುಪಿದ್ದೇವೆ. ಪ್ರತಿಭಾ ಅವರ ಕಾವ್ಯ ಬಹಳ ಮುಖ್ಯವಾಗಿರುವುದು ಇದನ್ನು ಒಳಗೊಂಡಿರುವುದರಿಂದ. ಆದರೆ ಅವರು ಇಡೀ ಬಿರುಕಿಗೆ ಕಾರಣಗಳನ್ನು ಚಿಂತನಶೀಲವಾಗಿ ಮಂಡಿಸುವ ಅಗತ್ಯವಿದೆ. 'ಸಮಗ್ರ' ಎನ್ನುವುದೀಗ ಕಾವ್ಯದ ಅಂತಿಮ ಸ್ಥಿತಿಯಾಗಿ ಉಳಿದಿಲ್ಲ, ಪ್ರತಿಭಾ ಅವರ ವಯಸ್ಸು ಗಮನಿಸಿದರೆ ಅವರಿನ್ನೂ ಕಾವ್ಯದ ಇನ್ನಿಂಗ್ಸ್‌ನಲ್ಲಿ ಅರ್ಧದಲ್ಲಿದ್ದಾರೆ. ನಾವು ಬಯಸುತ್ತಿರುವ ಬದಲಾವಣೆ ತೀರಾ ದೊಡ್ಡದಲ್ಲ. ಅದಿಲ್ಲದೆ ಅವರ ಕಾವ್ಯದ ಉದ್ದೇಶ ಸಾರ್ಥಕವಾಗದು ಎಂಬುದು ನನ್ನ ಗ್ರಹಿಕೆ.

ಇವತ್ತು ದೊಡ್ಡ ಸಂಖ್ಯೆಯಲ್ಲಿ ಕವಯತ್ರಿಯರು ಬರೆಯುತ್ತಿದ್ದಾರೆ; ಭಾವಗಳ ದೊಡ್ಡ ಪ್ರಪಂಚವನ್ನು ನಮ್ಮೆದುರು ತೆರೆದಿಡುತ್ತಿದ್ದಾರೆ. ಇದೆಲ್ಲದರ ಮೊತ್ತವಾಗಿ ಭಾಷೆ, ಬದುಕು ಎರಡೂ ಹಿಗ್ಗುತ್ತಿದೆ. ಆದರೆ ನಮ್ಮ ವಿಮರ್ಶಾ ಪ್ರಪಂಚ ಇದನ್ನು ಗ್ರಹಿಸುವಲ್ಲಿ ತುಂಬಾ ಹಿಂದೆ ಬಿದ್ದಿದೆ. ಕಾವ್ಯವನ್ನು ಸಮಗ್ರವಾಗಿ ನೋಡುವ, ಅದರಲ್ಲಿ ಬಿಡಿ ಭಾವಗಳ ಶಕ್ತಿಯನ್ನು ಗುರುತಿಸುವ, ಒಟ್ಟಂದದ ಮೇಲೆ ಅದು ಮಾಡುವ ಪರಿಣಾಮದ ಮೇಲೆ ಚರ್ಚಿಸುವ ಶಕ್ತಿ ಇನ್ನೂ ರೂಪುಗೊಂಡಿಲ್ಲ, ಇದರ ಪರಿಣಾಮ ಪ್ರತಿಭಾ ಅವರ ಕಾವ್ಯವನ್ನು ಓದುವಲ್ಲಿನ ತೊಡಕು. ಇದು ಕಳೆದ ಕಾಲು ಶತಮಾನದ ಕನ್ನಡ ಕಾವ್ಯದ ಬಿಕ್ಕಟ್ಟು ಕೂಡ ಹೌದು. ಏಕೆಂದರೆ, ಸಾಂಸ್ಕೃತಿಕ ಬಿಕ್ಕಟ್ಟುಗಳ ಮುಖಾಮುಖಿಯು ಒಬ್ಬ ಕವಯತ್ರಿಯ ಕಷ್ಟಸುಖಗಳ ಮಾತಲ್ಲ; ಬಹು ನೆಲೆಯ ಸಾಂಸ್ಕೃತಿಕ ಸಮಾಜದಲ್ಲಿ ಸಮುದಾಯಗಳು ಎದುರಿಸುತ್ತಿರುವ ಸವಾಲು ಹಾಗೂ

ಅರಸುತ್ತಿರುವ ಪರ್ಯಾಯಗಳ ವಿಧಾನವೂ ಹೌದು. ಪ್ರತಿಭಾ ಅವರ ಕಾವ್ಯ ಜನಪ್ರಿಯ ಮತ್ತು ಗಂಭೀರ ನೆಲೆಗಳೆರಡರಲ್ಲೂ ಏಕ ಕಾಲಕ್ಕೆ ಸಂಚರಿಸುತ್ತಿದೆಯೇ? ಅಥವಾ ಅದನ್ನು ಅನಪೇಕ್ಷಿತವಾಗಿ ತನ್ನ ಮೇಲೆ ಹೇರಿಕೊಳ್ಳುತ್ತಿದೆಯೆ? ಎಂಬ ಪ್ರಶ್ನೆ ಬಹಳ ಗಹನವಾದ ಚರ್ಚೆಯನ್ನು ಬೇಡುವಂತಹುದು. ಆದರೆ ಅವರ ಕಾವ್ಯದಲ್ಲಿನ ನಗರ ಕೇಂದ್ರೀಕೃತ ಆಧುನಿಕ ಮನೋಭಾವದ ಗೃಹಿಣಿಯೊಬ್ಬಳ ತಲ್ಲಣ ಮೂಡಿಸುವ ಪರಿಣಾಮ ಮತ್ತು ಅದರ ತಾಜಾತನ ಸಾಕಷ್ಟು ಮಹತ್ವದ್ದಾಗಿದೆ.

ವೈಚಾರಿಕ ನೆಲೆಗಳನ್ನು ನಿರಾಕರಿಸಿ ವೈಯಕ್ತಿಕ ನೆಲೆಗಳಿಗೆ ಹೋಗುವಾಗ ಅದರಲ್ಲೂ ಶೋಷಣೆಯ ನೆಲೆಗಳನ್ನು ಹುಡುಕುವಾಗ ಪ್ರತಿಭಾ ಭಾವುಕವಾಗಿ ಕಾವ್ಯ ರಚಿಸುತ್ತಾರೆ. ಆದರೆ ಕೌಟುಂಬಿಕ ನೆಲೆಗಳಿಗೆ ಬಂದಾಗ ಜಿಜ್ಞಾಸೆಯ ಕಾವ್ಯ ಸೃಷ್ಟಿಸುತ್ತಾರೆ. ಈ ಭೇದದಲ್ಲಿ ಸಂಘರ್ಷವೂ ಇದೆ. ಆಕರ್ಷಣೆ, ವಿಕರ್ಷಣೆಗಳೂ ಇವೆ. ದ್ವಂದ್ವಾತ್ಮಕ ಮನೋಭಾವದಲ್ಲಿ ಸಾಮಾಜಿಕ ಅನುಸಂಧಾನ ಮಾಡುವಾಗ, ಪ್ರಾಮಾಣಿಕವಾದ, ಸಾಂಸ್ಕೃತಿಕವಾದ ಪ್ರಭಾವಶಾಲಿ ಕವಿತೆಯನ್ನು ಪ್ರತಿಭಾ ಸೃಷ್ಟಿಸುತ್ತಾರೆ. ಆದ್ದರಿಂದ ಪ್ರತಿಭಾ ಅವರ ಶಕ್ತಿ ಇರುವುದು 'ಅವಳ ಜಗತ್ತಿನ' ಕುರಿತು ಬರೆಯುವುದರಲ್ಲಿ ಅಲ್ಲ, ಅದನ್ನು ದಾಟಿ ನಿಂತು ಅದರಲ್ಲಿನ ಬಿಗುವನ್ನು ಮುಖಾಮುಖಿ ಮಾಡುವಲ್ಲಿ. ಸಂಘರ್ಷಗಳು ಇರುವ ಕಾವ್ಯದಲ್ಲಿ ಸೃಜನಶೀಲತೆ ಮೈದಾಳುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಯ ಸಮಸ್ಯೆಗಳನ್ನು ನೋಡಲು ಸಾಧ್ಯವಾಗುವುದು ಪುರುಷ ಶೋಷಣೆಯನ್ನು, ಹೆಣ್ಣಿನ ಮುಗ್ಧತೆಯನ್ನು ಒಟ್ಟಾಗಿ ಇಡುವ ಸರಳೀಕೃತ ಸಂದರ್ಭಗಳಲ್ಲಿ ಅಲ್ಲ. ಬದಲಾಗಿ ಹೆಣ್ಣು ಎದುರಿಸುತ್ತಿರುವ ಸಮಸ್ಯೆಗಳಿಗೆ ಇತಿಹಾಸದುದ್ದಕ್ಕೂ ಬಂದ ಪುರುಷ ಕೇಂದ್ರೀಕೃತ ಸಾಂಸ್ಕೃತಿಕ ರಾಜಕೀಯವಿದೆ ಎಂದು ತಿಳಿಯುವಲ್ಲಿ. ಈ ರಾಜಕೀಯದಲ್ಲಿ ಹೆಣ್ಣಿನ ಪಾಲು ಕೂಡ ಇದೆ. ಶೋಷಣೆ ಗೆರೆ ದಾಟಿದಾಗ ಹೆಣ್ಣು ಪುರುಷ ಕೇಂದ್ರೀಕೃತ ಸಂಸ್ಕೃತಿಯ ವಕ್ತಾರಳಂತೆ ಮಾತನಾಡುವುದು ಅಪರೂಪವಲ್ಲ. ನಮ್ಮಲ್ಲಿ ಅತ್ತೆ-ಸೊಸೆ ಜಗಳಕ್ಕೆ ದೊಡ್ಡ ಇತಿಹಾಸವೇ ಇದೆ ಎಂಬುದನ್ನು ನಾವು ಮರೆಯುವಂತಿಲ್ಲ. ಪ್ರತಿಭಾ ಯಾವುದನ್ನೂ 'ಮನಸ್ಸಿನಲ್ಲಿ ಮುಂದಿದ್ದೆ' ಎನ್ನುತ್ತಾರೋ ಅದರಲ್ಲಿ ವಾಸ್ತವದಿಂದ ಬಿಡುಗಡೆ ಕಾಣುವ ಪ್ರಯತ್ನವಿದೆ. ಬಹುಶಃ ಗಟ್ಟಿಯಾದ ಕಾವ್ಯ ಹುಟ್ಟುವುದು ಹೀಗೆ ವಾಸ್ತವದಿಂದ ಬಿಡುಗಡೆ ಹೊಂದುವುದರಲ್ಲಿ ಅಲ್ಲ, ಬದಲಾಗಿ ವಾಸ್ತವಕ್ಕೆ ಮುಖಾಮುಖಿಯಾಗುವುದರಲ್ಲಿ. ಇಂತಹ ಶಕ್ತಿ ಪ್ರತಿಭಾ ಅವರ ಕಾವ್ಯಕ್ಕೆ ಬರಬೇಕಾದರೆ ಅನುಭವಗಳನ್ನು ಅವರು ನಿಗೂಢ ಅರ್ಥಗಳ ಶೋಧಕ್ಕಾಗಿ ಬಳಸಬೇಕಾಗುತ್ತದೆ. ಹೀಗಾದಾಗಲೇ ಅವರ ಕಾವ್ಯ ದಾರ್ಶನಿಕ ರೂಪಾಂತರವನ್ನು ಪಡೆಯುವುದು ಸಾಧ್ಯ. ಲೈಂಗಿಕತೆ ಮತ್ತು ಸಾಮಾಜಿಕ ಬದುಕಿನಲ್ಲಿನ ಬಿಕ್ಕಟ್ಟಿನ ಪರಿಶೀಲನೆ ಇಂದ್ರಿಯ ಗಮ್ಯ ವಿವರಗಳಾಚೆ ಹೋಗಿ ದಾರ್ಶನಿಕ ಭಿತ್ತಿಯಲ್ಲಿ ಜೀವನ ಶೋಧಿಸುವುದರಿಂದ ಆಗಬೇಕು. ಇದು ಪ್ರತಿಭಾ ಅವರ ಕಾವ್ಯ ಸಾರ್ಥಕತೆಯ ನೆಲೆ ತಲುಪಲು ಸಾಗಲೇಬೇಕಾದ ಹಾದಿ.

ಸಹಸಂಪಾದಕರು, ಮಲ್ಲಿಗೆ ಮಾಸಪತ್ರಿಕೆ,
೨೮, ಶಿರಸಿ ರಸ್ತೆ ಎದುರು
ಬೆಂಗಳೂರು - ೫೬೦ ೦೧೮,
ಮೊಬೈಲ್: ೯೩೪೪೨೨ ೦೯೮೨೫

# ಕೆಲವು ಅಡ್ಡಾದಿಡ್ಡಿ ಚಿಂತನೆಗಳು



◆ ಪ್ರತಿಭಾ ನಂದಕುಮಾರ್

ಏಕಕಾಲದಲ್ಲಿ ನಾವು ಎಷ್ಟೊಂದು ಜಗತ್ತುಗಳನ್ನು ಹೊತ್ತುಕೊಂಡು ತಿರುಗುತ್ತಿರುತ್ತೇವೆ! ಜೊತೆಗೆ ಕಾಲಗಳನ್ನೂ, ಕಂಪ್ಯೂಟರ್‌ಗಾದರೂ ಬಟನ್ ಕ್ಲಿಕ್ ಅನ್ನಿಸಬೇಕು. ಮನಸ್ಸಿಗೆ ಅದೂ ಬೇಡಾ, ಬೇಕಾದಾಗ ಬೇಕಾದ ಫೈಲ್‌ನ ತಕ್ಷಣ ತೆರೆಯಬಹುದು, ಮುಚ್ಚಬಹುದು. ಕೆಲವನ್ನು ಮುನ್ನೆಲೆಗೆ ತರಬಹುದು, ಕೆಲವನ್ನು ಹಿನ್ನೆಲೆಗೆ ಸರಿಸಬಹುದು. ಆದರೆ ಆ ಎಲ್ಲ ಚಿತ್ರಗಳನ್ನೂ ನಾವು ನಮ್ಮ ಜೊತೆಯೇ ಹೊತ್ತುಕೊಂಡು ಹೋಗುತ್ತಿರುತ್ತೇವೆ. ಒಂದು ದಿನ ಬೆಳಗ್ಗೆ ಕೆಲಸದವಳಾಗಿದ್ದು ಮಧ್ಯಾಹ್ನ ಆಫೀಸಿನವಳಾಗಿದ್ದು ಸಂಜೆ ಕವಿ ಅನ್ನಿಸಿಕೊಂಡು ಕವನ, ಸನ್ಮಾನ ಇತ್ಯಾದಿ ರಾತ್ರಿ ತಾನೇ ತಾನಾಗಿರುವ ಇದೆಲ್ಲ ಒಬ್ಬಳೇನಾ ಅಥವಾ ಬೇರೆ ಬೇರೇನಾ ಅಂತ ಆಲೋಚನೆ. ಒಂದೇ ಕ್ಷಣದಲ್ಲಿ ಎಷ್ಟೊಂದು ಭಾವನೆಗಳು ಪುಳಕ್ಕಂತ ಹಾದುಹೋಗುತ್ತವೆ. ಎಷ್ಟೋ ಸಲ ಶೂನ್ಯವೋ, ಸ್ನೇಹವೋ, ಪ್ರೀತಿಯೋ, ಪ್ರಣಯವೋ ಗೊತ್ತಾಗದೇ ಇರುವಂತಹ ಸಂದರ್ಭ ಬರುತ್ತಲ್ಲ ಹಾಗೆ.

ಎ.ಕೆ. ರಾಮಾನುಜನ್ ಒಂದು ಕಡೆ ಹೇಳಿದ್ದರು, "ಒಂದೇ ದಿನದಲ್ಲಿ ನೀವು ಎಷ್ಟು ಅವಸ್ಥಾಂತರಗಳನ್ನು, ಎಷ್ಟು



ಭಾವನೆಗಳನ್ನು ಹಾದುಬರುತ್ತೀರಿ. ಅದರಲ್ಲಿ ಯಾರು ನೀವು? ಎಲ್ಲರೂ 'ಮತ್ತೊಬ್ಬನ ಆತ್ಮಚರಿತ್ರೆ'ಯನ್ನೇ ಬರೆಯುತ್ತಾರೆ?

ಒಂದು ರಾತ್ರಿ ಈ ಪದ್ಯ ನನ್ನೊಳಗೆ ಹುಟ್ಟಿದಾಗ ನಾನು ಯಾರಾಗಿದ್ದೆ?

"ಮತ್ತೆ ಯಾವಾಗ ಭೇಟಿ?"

ಲಿಫ್ಟಿನೊಳಗ ಕಾಲಿಡುತ್ತಾ ಕಾತರದಲ್ಲಿ ಕೇಳಿದೆ
ಭುಜದ ಮೇಲಿನ ಕೈ ತೆಗೆದು ಅವರು ಬಾಗಿಲು ಹಾಕುವಾಗ
ಮತ್ತೆ ಕೇಳಿದೆ ಈ ಬಾರಿ ಹೆಚ್ಚಿದ ಆತಂಕದಲ್ಲಿ
ಮುಖ ತಿರುಗಿಸಿ ಕಣ್ಣೀರು ಮರೆಮಾಚಿ

"ಮತ್ತೆ ಯಾವಾಗ ಬರುತ್ತೀರಿ?"

ಅಕ್ಕನ ವಚನಗಳ ಬಗ್ಗೆ ಅಧ್ಯಯನ ಮಾಡಿ ಮುಗಿಸಿ
ಈಗವರು ಮೀರಾಭಜನುಗಳನ್ನು ಓದುತ್ತಿದ್ದಾರೆ
ಕಳೆದ ವರ್ಷ ಅವರು ಆಂಡಾಳ್‌ನ ಪೂರಾ ಅರಿತುಕೊಂಡರು
ಈಗ ತಾನೇ ಅವರಿಗೆ ಲಲ್ಲಾ ಕುರಿತು ತಿಳಿದಿದೆ
ರಾಧೆಯಂತೂ ಬಿಡಿ ಕಾವ್ಯವನ್ನೇ ಬರೆದಿಲ್ಲ

ಕಪ್ಪು ಮಣ್ಣಿನ ನಾಡಿನಿಂದ
ಚುಕ್ಕಿ ಪಟ್ಟೆಗಳ ಬಾವುಟದ ನಾಡಿಗೆ ಮರಳುವತ್ತಾ
ಈ ಲಿಫ್ಟ್ ಬಾಗಿಲು ಮುಚ್ಚಿ ಶೂನ್ಯ ಸಂಪಾದನೆಯಾಗುತ್ತದೆ
ಅದಕ್ಕೇ ಕಾದವಳಂತೆ ಮತ್ತೆ ಕೇಳಿದೆ

"ಯಾವಾಗ ಪುನರ್ ದರ್ಶನ?"

ಶರವೇಗದಲ್ಲಿ ಇಳಿಯುತ್ತಾ ಲಿಫ್ಟ್
ಹಲವು ಜನ್ಮಗಳನ್ನು ದಾಟಿ
ಶತಮಾನಗಳನ್ನು ಕಳೆದು ಹಠಾತ್ತಾಗಿ ಅವರು
ದಣಿದಿದ್ದರೂ ಖುಷಿಯಾಗಿ

ನಕ್ಕರು ಶಿವ ಕೃಷ್ಣ
ಕೂಡಲಸಂಗಮದೇವಗಳು ಒಂದಾಗಿ ಸಂಗಮಗೊಂಡು
ಕೊನೆಯದಾಗಿ ಅವಸರದಲ್ಲಿ ಮುತ್ತಿಟ್ಟು
ತೆರೆದ ಬಾಗಿಲಿನಿಂದ ಹೊರಗೆ ಹೊರಟೇಹೋದರು

ನಾವೆಲ್ಲ ಅಲ್ಲಿ ನಿಂತೇ ಇದ್ದೆವು
ಪರಸ್ಪರ ಸಂತೈಸುತ್ತಾ
ಮೀರಾ, ಅಕ್ಕ, ಆಂಡಾಳ್, ಲಲ್ಲಾ, ರಾಧೆ.

ಅಲ್ಲಿದ್ದವಳು ಯಾರು? ಈ ಪದ್ಯ ಹುಟ್ಟಿದ್ದು ಯಾರಲ್ಲಿ? ಅದನ್ನು ಬೇರೆ ಯಾರಾದರೂ ಓದಿದಾಗ ಅವರು ಯಾರನ್ನು ಆರಿಸಿಕೊಳ್ಳುತ್ತಾರೆ? ಅಷ್ಟೇ ಚಾಯ್ಸ್‌ಗಳೇ? ಇದರಾಚೆ ಬೇರೆ ಏನೂ ಇಲ್ಲವೇ? ಹಾಗಾದರೆ ನನ್ನ ಉಳಿದ ಅವಸ್ಥೆಗಳು ನಿಜವೋ, ಸುಳ್ಳೋ? ಹೆಂಡತಿ, ತಾಯಿ, ಪ್ರೇಯಸಿ ಇತ್ಯಾದಿ? ಅದೆಲ್ಲವೂ ಹೌದು, ಜೊತೆಗೇ ಇದೂ ಹೌದು.

ಎಲ್ಲರೂ ಗುರುತಿಸುವುದು ಯಾವುದಾದರೊಂದು ಮುಖ್ಯ ಅಸ್ತಿತ್ವದಿಂದ ಮಾತ್ರ. ಅವರ ಕೆಲಸ ಅಥವಾ ಸಾಮಾಜಿಕ ಸ್ಟೇಟಸ್‌ನಿಂದ. ಇಂತಹವರ ಮಗಳು, ಹೆಂಡತಿ, ತಾಯಿ ಇತ್ಯಾದಿ. ಹಾಗೆ ಪರಿಚಯಿಸಿಕೊಳ್ಳುತ್ತಿರುವಾಗಲೇ ಅವಳು ಇನ್ನೂ ಹಲವಾರು ಆಗಿರುತ್ತಾಳಲ್ಲಾ ಅದರ ಬಗ್ಗೆ ಅವರಿಗೆ ಗೊತ್ತಿರುತ್ತದೋ ಇಲ್ಲವೋ? ಒಬ್ಬರ ಜೊತೆ ಮಾತಾಡುತ್ತಿರುವಾಗ ನೋಡುತ್ತಿರುವವರಿಗೆ ಒಂದು ಹೆಣ್ಣು ಒಂದು ಗಂಡಿನ ಜೊತೆ ಮಾತಾಡುತ್ತಿದೆ ಅಂತ ಅಥವಾ ಒಬ್ಬನ ಹೆಂಡತಿ ಇನ್ನೊಬ್ಬಳ ಗಂಡನ ಜೊತೆ ಅಂತ ಅಥವಾ ಒಬ್ಬಳು ಸ್ನೇಹಮಯಿ ಇನ್ನೊಬ್ಬ ಸ್ನೇಹಿತನ ಜೊತೆ ಅಂತ ಅಥವಾ ಒಬ್ಬಳು ಹಾದರಗಿತ್ತಿ ಇನ್ನೊಬ್ಬ ಕಾಮಿಯ ಜೊತೆ ಅಂತ ಅಥವಾ ಇಬ್ಬರು ಪ್ರಣಯಿಗಳು ಅಂತ ಅಥವಾ ಇಬ್ಬರು ನತದೃಷ್ಟರು ಅಂತ ಅಥವಾ ಇಬ್ಬರು ಖದೀಮರು ಅಂತ ಅಥವಾ ಇಬ್ಬರು... ಏನು ಬೇಕಾದರೂ ಆಗಿರಬಹುದು.

ಮೊದಮೊದಲು ತನಗೆ ಇಷ್ಟಬಂದ ಚಿತ್ರವನ್ನೇ ಕೊಡಲು ಎಚ್ಚರಿಕೆ ವಹಿಸುವುದು. ನಂತರ ಅವರು ಏನು ಅಂದುಕೊಳ್ಳುತ್ತಾರೋ ಅದನ್ನು ಸಮರ್ಥಿಸಿಕೊಳ್ಳುವುದು. ನಂತರ ನೀವು ಏನೇ ಅಂದುಕೊಂಡರೂ ನಾನು ಅದಲ್ಲ ಅನ್ನುವುದು, ಆಮೇಲೆ ನೀವು ಏನೇ ಅಂದುಕೊಂಡರೂ ನಾನು ಇದೇ ಅಂತ ಸೆಡ್ಡು ಹೊಡೆಯುವುದು ಹೀಗೆಲ್ಲ ನಡೆಯುತ್ತಿರುತ್ತದೆ.

ಆದರೆ ಇದೆಲ್ಲ ಅವಳ ಅಂತರಂಗದೊಳಗೆ ನಡೆಯುವುದು. ಸದಾ ಕಾಲ ಅವಳು "ಏನ್ರಯ್ಯ, ಅನ್ನುತ್ತೀರಾ, ಅನ್ನಿ, ಬರ್ತೀರಾ, ಬನ್ನಿ" ಅಂತ ಒಳಗೊಳಗೇ ಮಸೆಯುತ್ತಿರುತ್ತಾಳೆ. ಅದು ಯಾರಿಗೂ ಗೊತ್ತಾಗುವುದಿಲ್ಲ. ಯಾಕೆಂದರೆ ಅದರ ಬಗ್ಗೆ ಮಾತಾಡುವುದು, ಅದನ್ನು ಹೊರಗೆ ತೋರಿಸಿಕೊಳ್ಳುವುದು ಅವಳಿಗೆ ಬೇಕಿಲ್ಲ.

'ದೀಸ್ ಆರ್ ನಾಟ್ ಸ್ವೀಟ್ ಗರ್ಲ್ಸ್' ಅನ್ನುವ ಲ್ಯಾಟಿನ್ ಅಮೆರಿಕನ್ ಮಹಿಳಾ ಕವಿಗಳ ಸಂಕಲನದ ಮುನ್ನುಡಿಯಲ್ಲಿ ಸಂಪಾದಕಿ ಮಾರ್ಜೊರಿ ಅಗೊಸಿನ್ ಬರೆಯುತ್ತಾಳೆ — "ಚರಿತ್ರೆಯುದ್ದಕ್ಕೂ ಮಹಿಳೆಯರು ಮೌನಕ್ಕಿಂತಲೂ ಮಾತಿಗೇ ಹೆಚ್ಚು ಹತ್ತಿರವಾಗಿದ್ದಾರೆ. ಮಾತಾಡುವುದು, ಹಾಡುವುದು, ಪಿಸುಗುಟ್ಟುವುದು ಇತ್ಯಾದಿಗಳ ಮೂಲಕ ಮಹಿಳೆಯರು ಕಲಿಯುತ್ತಾರೆ ಮತ್ತು ತಮ್ಮನ್ನು ಅಭಿವ್ಯಕ್ತಿಗೊಳಿಸುತ್ತಾರೆ. (ಮೊನ್ನೆ 'ನಾದಲೀಲೆ' ಕಾರ್ಯಕ್ರಮದಲ್ಲಿ ಬೇಂದ್ರೆಯವರ 'ಮಾಯಾ ಕಿನ್ನರಿ' ಓದುವಾಗ ಅವರು ಅವಳನ್ನು ವರ್ಣಿಸಲು ಬಳಸುವ ಚಿತ್ರಗಳು ಹೀಗೆಯೇ ಇತ್ತು. ಗುಣುಗುಣು ಗೊಣಗುಟ್ಟುವುದು, ಕುನ್ನಿಯ ಹಾಗೆ ಕುಣಗುಡುವುದು, ಮುಳುಮುಳೂ ಅಳುವುದು, ತುಟಿಕಚ್ಚಿ ತಡವರಿಸುವುದು, ಗುಜುಗುಜು ಗುಲುಗುಲು ನುಡಿಯುವುದು, ತನನಾ ಅನ್ನುವುದು... ಇದಕ್ಕೆ ಇನ್ನಷ್ಟು ಸೇರಿಸಬೇಕಾದರೆ ಬಳೆ, ಕಾಲ್ಗೆಜ್ಜೆ ಸದ್ದು ಮಾಡುವುದು, ಸುಳ್ಳೇ ಕೆಮ್ಮುವುದು ಇತ್ಯಾದಿಗಳನ್ನೂ ಸೇರಿಸಬಹುದು) ಅವರು ಬರಿಯ ಲಿಖಿತ ಅಕ್ಷರಗಳಿಂದ ಮಾತ್ರವಲ್ಲ ಇತರ ನೂರೆಂಟು ವಿಧಾನಗಳಿಂದ ತಮ್ಮನ್ನು ಅಭಿವ್ಯಕ್ತಿಗೊಳಿಸಿಕೊಳ್ಳುತ್ತಾರೆ. ಅವರು ಮಾಡುವ ಕಸೂತಿ, ಚಿತ್ರಿಸುವ ಹಸೆ, ಮಾಡುವ ಅಡಿಗೆ ಎಲ್ಲವೂ ಅವರನ್ನು ಅಭಿವ್ಯಕ್ತಿಗೊಳಿಸುತ್ತಿರುತ್ತದೆ. ಮಹಿಳೆಯರು ಮಾತಿಗೆ ಅಷ್ಟು ಹತ್ತಿರವಾಗಿದ್ದರೂ ಅವರಿಗೆ ಹೆಚ್ಚಿನ ಮಟ್ಟಿಗೆ ವಾಕ್ ಸ್ವಾತಂತ್ರ್ಯವಿಲ್ಲ. ಸೇಂಟ್ ಪಾಲ್ ಬೈಬಲ್‌ನಲ್ಲಿ ಮಹಿಳೆಯರು ಚರ್ಚಿನಲ್ಲಿ ಮಾತಾಡಬಾರದು, ಮೌನವಾಗಿರಬೇಕು ಎಂದು ಆದೇಶಿಸಿದ. ಮಹಿಳೆಯರನ್ನು ಮಾತಾಡದಂತೆ

ತಡೆಯಲು ಅನೇಕ ಗಾದೆಗಳು, ಸಾಮಾಜಿಕ ನಂಬಿಕೆಗಳೇ ಹುಟ್ಟಿಕೊಂಡವು. ಮುಚ್ಚಿದ ಬಾಯೊಳಗೆ ನೊಣ ಹೋಗುವುದಿಲ್ಲ ಅಂತ ಎಚ್ಚರಿಸಿದರು (ಮಾತು ಮನೆ ಕೆಡಿಸ್ತು, ತೂತು ಒಲೆ ಕೆಡಿಸ್ತು).''

ಹಾಗಂತ ಮಹಿಳೆಯರು ಸುಮ್ಮನಿದ್ದಾರೆಯೇ? ಏಳು ಸುತ್ತಿನ ಕೋಟೆಯೊಳಗೆ ಬಚ್ಚಿಟ್ಟು, ಸಕಲ ಸೈನ್ಯವನ್ನೇ ಕಾವಲಿಟ್ಟರೂ ರಾಜಕುಮಾರಿ ರಾಜಕುಮಾರನನ್ನು ನೋಡಿ ವರಿಸುತ್ತಾಳೆ. ಜಾನಪದ ಹೆಣ್ಣು ಹೇಳಬೇಕಾದ್ದನ್ನು, ಹೇಳಬಾರದ್ದನ್ನು ಎಲ್ಲವನ್ನೂ ಹೇಳಿಯೇ ತೀರುತ್ತಾಳೆ. ನಲ್ಲ ಸತ್ತ ಅನ್ನಲು ಆಗದಿದ್ದರೂ 'ಗಡಿಗೆ ನುಚ್ಚಾಯ್ತು ನೀರ ಹೊಳಿಯಾಗೆ' ಅಂತ ಅಳುತ್ತಾಳೆ. ಅದು ಅವಳು ಅತ್ತೆ ಕಾಣದ ಹಾಗೆ, ಮಾವ ಕಾಣದ ಹಾಗೆ ಕಾಪಾಡಿಕೊಂಡು ಬಂದ ಗಡಿಗೆ. ಅದನ್ನು ತಡೆಯುವ ಧೀರ ಯಾರಾದರೂ ಇದ್ದರೆ ಬನ್ನಿ.

ಹಾಗೆಯೇ ಪದ್ಯ ಬರೆಯುವುದು.

''ಎ ಮ್ಯಾರೀಡ್ ಫೆಮಿನಿಸ್ಟ್'' ಪುಸ್ತಕದಲ್ಲಿ ಆಂಜೆಲಾ ಬರೊನ್ ಮ್ಯಾಕ್ಬ್ರೈಡ್ ಹೇಳುತ್ತಾಳೆ, ''ನಾನೊಬ್ಬಳು ಮದುವೆಯಾದ ಸ್ತ್ರೀವಾದಿ. ಹಾಗಂದರೇನು? ನನ್ನಲ್ಲಿರುವ ದ್ವಂದ್ವಗಳಿಂದಾಗಿ ಇನ್ನೇನು ಸ್ಫೋಟಗೊಳ್ಳುವೆನೇನು? ಒಂದು ಕಡೆ ಸಾಂಪ್ರದಾಯಿಕ ಮೌಲ್ಯಗಳನ್ನು ಒಪ್ಪಿಕೊಳ್ಳುತ್ತಾ ಇನ್ನೊಂದು ಕಡೆ ಸ್ತ್ರೀವಾದಿ ಸಿದ್ಧಾಂತಗಳಿಗೂ ಕಟ್ಟುಬಿದ್ದವಳೇನು? ಒಬ್ಬ ಗಂಡಿಗೆ ಸೇರಿದವಳಾಗಿರಲು ಬಯಸುತ್ತಲೇ ಅವನಿಗೆ ಅಡಿಯಾಳಾಗಿರಲು ಒಪ್ಪದವಳೇನು? ಬೇರುಗಳಿರಬೇಕೆಂದು ಹೇಳುತ್ತಲೇ ಅಪ್ಪ ನೆಟ್ಟ ಆಲದ ಮರಕ್ಕೆ ನೇತುಹಾಕಿಕೊಳ್ಳಲು ಬಯಸದವಳೇನು?'' ಹೀಗೆ ನೂರೆಂಟು ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಲೇ ಆಂಜೆಲಾ ಸುಳಿಯ ನಡುವೆ ಹೋಗುತ್ತಾಳೆ.

ಪುರುಷರಿಗೆ ವ್ಯಕ್ತಿ ಅಂದರೆ ಆತನ ಮನಸ್ಸು – ಬುದ್ಧಿ – ವ್ಯಕ್ತಿತ್ವ ಎಲ್ಲ. ಹೆಣ್ಣು ಅಂದರೆ ಅವಳ ದೇಹ. ವುಮನ್ ಈಸ್ ಹರ್ ಬಾಡಿ. ಹುಡುಗ ಏನು ಮಾಡುತ್ತಿದ್ದಾನೆ ಅನ್ನುತ್ತಾರೆ. ಹುಡುಗಿ ನೋಡಲು ಹೇಗಿದ್ದಾಳೆ ಅನ್ನುತ್ತಾರೆ. ಸುಂದರವಾಗಿದ್ದರೆ ಹುಡುಗಿಯ ಅರ್ಧ ಸಮಸ್ಯೆ ಪರಿಹಾರ. ಆದರೆ ಸುಂದರಿಯು ಬುದ್ಧಿವಂತೆಯೂ ಆಗಿದ್ದರೆ?

ಕವಿ ಅತ್ಯಂತ ಸುಂದರಿ, ಶ್ರೀಮಂತೆ, ಯುವತಿ ಆಗಿದ್ದರೆ ಅವಳ ಕವಿತೆ ಅವಳ ರೂಪಿನಿಂದಾಗಿಯೇ ಸುಂದರವಾಗಿದೆ ಅಂದುಬಿಟ್ಟರೆ? ಉಲ್ಟಾ ಕವಿ ಚೆನ್ನಾಗಿಲ್ಲದಿದ್ದರೆ ಅವಳ ಕವನ ಚೆನ್ನಾಗಿಲ್ಲದಿದ್ದರೂ ಅಯ್ಯೋ ಪಾಪಾ ಅಂತ ಹೊಗಳಿದರೆ? ಬೇಗಂ ಅಖ್ತರ್ ತುಂಬಾ ಚೆನ್ನಾಗಿದ್ದುದರಿಂದ ಅವಳ ಸಂಗೀತಕ್ಕಿಂತ ಅವಳ ಸೌಂದರ್ಯದ ಕಡೆಗೇ ಹೆಚ್ಚು ಗಮನ ಕೊಡುತ್ತಿದ್ದರಂತೆ. ಪರ್ವೀನ್ ಸುಲ್ತಾನಾಗೂ ಅದೇ ಕಷ್ಟ. ಆದರೆ ಪುರುಷರಿಗೆ ಯಾಕೆ ಹಾಗಾಗುವುದಿಲ್ಲ? ರೂಪಕ್ಕೂ ಬರವಣಿಗೆಗೂ ಯಾವುದ್ಯಾವುದೇ ಸಂಬಂಧ ಇಲ್ಲ. ಆದರೆ ಅವಳ ಒಳತೋಟಿ ಇರುತ್ತಲ್ಲಾ, ನಾನು ಸುಂದರಿಯೋ, ಅಲ್ಲವೋ, ಸುಂದರಿ ಅಲ್ಲದಿದ್ದರೆ ಅದರ ಬಗ್ಗೆ ಇರುವ ನಿರಾಸೆ, ಇನ್ನೂ ಸ್ವಲ್ಪ ಎದೆ ದುಂಡಾಗಿದ್ದರೆ, ನಡು ಇನ್ನಷ್ಟು ತೆಳುವಾಗಿದ್ದರೆ, ತುಟಿ ಕೆಂಪಗೆ, ಕೂದಲು ರೇಷ್ಮೆಯಂತೆ, ಮೈ ಚರ್ಮ ನುಣುಪಾಗಿ, ಹಲ್ಲು ಬೆಳ್ಳಗೆ ದಾಳಿಂಬೆ ಕೋದಂತೆ, ಬೆರಳುಗಳು ಮಾಟವಾಗಿ, ತೊಡೆ ಬಾಳೆದಿಂಡಿನಂತೆ... ಇದ್ದಿದ್ದರೇ...

ಕವನ ಬರೆಯುವಾಗ ಅದೆಲ್ಲ ಇರುತ್ತದೆ. ಪ್ರಣಯಿನಿಗೆ ಜಗತ್ತೇ ಸುಂದರವಾಗಿ ಕಾಣಿಸುತ್ತದಂತೆ.

ನನ್ನ ಅತ್ಯಂತ ನೆಚ್ಚಿನ ಕವಿ ಮಾಯಾ ಏಂಜೆಲೋ ಹೇಳ್ತಾಳೆ –

## ‘ಅಸಾಧಾರಣ ಹೆಣ್ಣು’

ಸುಂದರಿಯರು ಆಶ್ಚರ್ಯ ಪಡುತ್ತಾರೆ ನನ್ನ ರಹಸ್ಯ ಎಲ್ಲಡಗಿದೆಯೆಂದು
ನಾನು ಮುದ್ದಾಗಂತೂ ಇಲ್ಲ, ಫ್ಯಾಷನ್ ಮಾಡೆಲ್‌ನ ಸೈಜಂತೂ ಅಲ್ಲ,
ಆದರೆ ನಾನು ಹೇಳಹೋದರೆ ಅವರು ಸುಳ್ಳೆನ್ನುತ್ತಾರೆ
ನಾನನ್ನುತ್ತೇನೆ,
ಅದು ನನ್ನ ಚಾಚಿದ ತೋಳುಗಳಲ್ಲಿದೆ
ನನ್ನ ಪೃಷ್ಠದ ವಿಶಾಲದಲ್ಲಿದೆ
ನನ್ನ ದಾಪು ಹೆಜ್ಜೆಯಲ್ಲಿದೆ
ನನ್ನ ತುಟಿಯ ವಕ್ರದಲ್ಲಿದೆ
ನಾನೊಬ್ಬಳು ಹೆಣ್ಣು
ಅಸಾಧಾರಣ
ಅಸಾಧಾರಣ ಹೆಣ್ಣು
ಅವಳೇ ನಾನು

ನೆನಪಿದೆ. ನನ್ನ ಮೊಟ್ಟಮೊದಲ ನೆಚ್ಚಿನ ಕವಿತೆ ಮಾಯಾ ಏಂಜೆಲೋದೇ ‘‘ಕುಡಿಯಲು ಒಂದು ಲೋಟ ನೀರು ಕೊಡಿ.’’ ಆಗಿನ್ನೂ ನಾನು ಹೈಸ್ಕೂಲಿನಲ್ಲಿದ್ದೆ. ಅವಳು ಹೇಳುತ್ತಾಳೆ –

ನಾನು ಕೆಲಸ ಮಾಡುವ ಮನೆಯ ಹುಡುಗಿ
ಆರು ವರ್ಷದವಳು
ಲೇ ಅನ್ನುತ್ತಾಳೆ
ನಾನು ಅಮ್ಮಾವ್ರೇ ಅನ್ನುತ್ತೇನೆ
ಕೆಲಸ ಹೋಗುವ ಭಯ

ಸಾಯುವ ಮೊದಲು ನನಗೇನು ಬೇಕು ಅನ್ನುತ್ತೀರಿ
ಒಂದು ಲೋಟ ತಣ್ಣಗಿನ ನೀರು ಕೊಡಿ

ಅದು ದಣಿದ ಜೀವದ ಧ್ವನಿ. ನನಗೆಂದೂ ಮಾಯಾ ಏಂಜೆಲೋಗೆ ನೀನ್ಯಾಕೆ ಪದ್ಯ ಬರೆಯುತ್ತೀಯಾ ಅಂತ ಕೇಳಬೇಕೆಂದು ಅನ್ನಿಸಲಿಲ್ಲ.

೧೯೭೪ರಲ್ಲಿ ಆಲನಹಳ್ಳಿ ಶ್ರೀಕೃಷ್ಣ ಮದ್ರಾಸಿಗೆ ಬಂದಿದ್ದ. ಅವನ ಪರಸಂಗದ ಗೆಂಡೆತಿಮ್ಮ ತಮಿಳಿನಲ್ಲಿ ಚಿತ್ರವಾಗುತ್ತಾ ಇತ್ತು. ಅದಕ್ಕೆ ಬಂದಿದ್ದ. ಅವನು ನನ್ನ ಅಣ್ಣನ ಗೆಳೆಯನಾಗಿದ್ದ. ಮದ್ರಾಸಿನಲ್ಲಿ ನಾನು, ಅವನು, ಚಿನ್ನಪ್ಪಗೌಡ ಮರೀನಾ ಬೀಚಿಗೆ ಹೋದೆವು. ಅಲ್ಲಿ ಕೂತು ಮಾತನಾಡುತ್ತಿದ್ದಾಗ ಶ್ರೀಕೃಷ್ಣ ಹೇಳಿದ, ‘‘ಹುಡುಗಿಯರು ಮದುವೆಯಾಗಿ ಎಷ್ಟು ಅಸಹ್ಯ ಆಗಿಬಿಡುತ್ತಾರೆ. ನನ್ನ ಗೆಳೆಯತಿಯೊಬ್ಬಳು ಎಷ್ಟು ಚೆನ್ನಾಗಿದ್ದಳು. ಕಾಲೇಜು ಮುಗಿದ ಮೇಲೆ ಅವಳು ಸಿಗಲೇ ಇಲ್ಲ. ಆಮೇಲೆ ಎಷ್ಟೋ ವರ್ಷಗಳ ನಂತರ ಸಿಕ್ಕಳು. ಮದುವೆಯಾಗಿದ್ದಳು. ದಪ್ಪಗೆ ಡ್ರಂ ಥರ ಆಗಿಹೋಗಿದ್ಲು, ಕೈಗೊಂದು ಕಾಲಿಗೊಂದು ಮಕ್ಕಳು ಕಟ್ಟಿಕೊಂಡು ಒಳ್ಳೇ ಮುದುಕಿ ಥರ ಆಗಿಹೋಗಿದ್ಲು, ಥೂ...’’ ಅಂದ.

ರೋಷ ಉಕ್ಕಿ ಬಂದು ಅವತ್ತೇ ನಾನು, ‘‘ನಾವು ಹುಡುಗಿಯರೇ ಹೀಗೆ...’’ ಪದ್ಯ ಬರೆದೆ.

ಆಮೇಲೆ ಹೀಗೇ ಕೋಪ, ಪ್ರೀತಿ, ನಿರಾಸೆ, ನಿರೀಕ್ಷೆ ಎಲ್ಲವನ್ನೂ ಹೇಳಲು ಕವನವೇ ದಾರಿ.

ಏನು ಬರೆದರೂ ಅದರಿಂದ ಯಾರಿಗಾದರೂ ಒಂದಲ್ಲ ಒಂದು ರೀತಿಯಲ್ಲಿ ಏನಾದರೂ ಪರಿಣಾಮ ಆಗುವುದು ಗ್ಯಾರಂಟಿ ಆಗಿದ್ದುದರಿಂದ ಯಾರಾದರೂ ಏನಾದರೂ ಅಂದುಕೊಳ್ಳಲಿ, ನನಗೇನು.

೧

ತಾಳ್ಮೆ ಸಹನೆ ಎಚ್ಚರಿಕೆ ಅರಿವು
ಎಲ್ಲಾ ಹೇಳಿಕೊಟ್ಟಿದ್ದರು

ರಿಸ್ಕು ತಗೊಳ್ಳುವ ಬಗ್ಗೆ
ಒಂದು ಮಾತೂ ಹೇಳಿರಲಿಲ್ಲ

ಈಗ ಎಲ್ಲಾ ಮುಗಿದ ಮೇಲೆ
ಅವರು ಸತ್ತೇ ಹೋದ ಮೇಲೆ

ಇವನು ಹೇಳುತ್ತಿದ್ದಾನೆ
ಮಾಡಿಬಿಡಬೇಕಿತ್ತು ಅಂತ

ಪ್ರಾಸದ ಬಗ್ಗೆ
ಇವನಿಗೇನು ಗೊತ್ತು
ರಿಸ್ಕು ಮತ್ತು ಸೆಕ್ಸು

೨

ಇಪ್ಪತ್ತನಾಲ್ಕು ಗಂಟೆ ಕರ್ತವ್ಯ ಪ್ರಜ್ಞೆಯಲ್ಲಿ
ಇಪ್ಪತ್ತಮೂರು ವರ್ಷ ಕಳೆದು, ಕನಸು ಪಕ್ಕಕ್ಕಿಟ್ಟು
ಪ್ರೇಮಿಸಿದವನನ್ನು ಮರೆತು ಕಾಮಿಸಿದವನನ್ನೂ ಕಳಿಸಿ
ಮನೆ ಮಕ್ಕಳು ಮಾನ ಮರ್ಯಾದೆ ಮನಸ್ಸುಗಳನ್ನೂ
ಕಾಪಾಡಿಕೊಂಡು ಬೊಜ್ಜು ಬಂದು ತಲೆ ನೆರೆತು

ಕನ್ನಡಿಯಲ್ಲಿ ಯಾರೋ ಕಾಣಿಸುತ್ತಾಳೆ

ಇರಬೇಕು ಕೊನೆತನಕ
ರಿಸ್ಕು ತೆಗೆದುಕೊಳ್ಳುವ ತವಕ

ಅಂತ ಬರೆದಿದ್ದನ್ನು ತೋರಿಸಿದರೆ ಪರಿಣಾಮ ನೆಟ್ಟಗಿರುವುದಿಲ್ಲ. ಹಾಗಂತ ಅನ್ನಿಸಿದ್ದನ್ನು ಬರೆಯದೇ ಇರುವುದಕ್ಕಾಗುತ್ತದೆಯೇ? ನಾನು ಸುಂದರಿ ಅಲ್ಲ, ನಾನೇ ಸುಂದರಿ ಅಂತ, ಹೇಳಲಾಗದೇ ತೊಳಲಾಡುತ್ತಿದ್ದೇನೆ ಅಂತ, ತುಟಿಗೆ ಬಂದದ್ದನ್ನು ಹೇಳದೇ ಎಂದಿಗೂ ಇರುವುದಿಲ್ಲ ಅಂತ, ಸ್ತ್ರೀ ವಾದಿ ಅಂತ, ಪುರುಷನನ್ನು ಅತೀ ಮುದ್ದುಮಾಡಿ ಹಾಳುಮಾಡುವವಳಂತ, ನನ್ನ ದೇಹ ಹೆಣ್ಣಿನದಾದ್ದರಿಂದ, ನಾನು ಅಸಾಧಾರಣಳಾದ್ದರಿಂದ, ನಾನು ಕೈಗೊಂದು, ಕಾಲಿಗೊಂದು ಮಕ್ಕಳಾದರೂ ಇನ್ನೂ ಮೀರಾ, ಅಕ್ಕ, ಆಂಡಾಳ್, ಲಲ್ಲಾ, ರಾಧಾ ಆಗಿರುವುದರಿಂದ ರಿಸ್ಕು ಮತ್ತು ಸೆಕ್ಸು ಬಗ್ಗೆ ತಲೆಕೆಡಿಸಿಕೊಳ್ಳದಿರುವುದರಿಂದ ಬರೆಯುತ್ತೇನೆ.

# ಸನಾತನಿಯ ಜೊತೆ ಸಂಭಾಷಣೆ

◆ ಪ್ರತಿಭಾ ನಂದಕುಮಾರ್

ಗಂಡಸರೆಂದರೆ ಅತೀ ತಕರಾರಿನವರು
ಸಂಪ್ರದಾಯಸ್ಥಳಾದರೂ ಆಧುನಿಕಳಾದರೂ
ಸೀರೆ ಉಟ್ಟರೂ ಪ್ಯಾಂಟು ತೊಟ್ಟರೂ
ಮಾತಾಡಿದರೂ ಆಡದಿದ್ದರೂ
ನಕ್ಕರೂ ನಗದಿದ್ದರೂ
ಮುಟ್ಟಿದರೂ ಮುಟ್ಟದಿದ್ದರೂ
ಮುತ್ತು ಕೊಟ್ಟರೂ ದೂರ ನಿಂತರೂ
ಬರೆದರೂ ಬರೆಯದಿದ್ದರೂ
ಹೆದರಿದರೂ ಹೆದರದಿದ್ದರೂ
ಏನೇ ಮಾಡಿದರೂ ಅದಕ್ಕೊಂದು
ತಪ್ಪದ ರಗಳೆ..

ನನಗೆ ನನ್ನದೇ ಸಾವಿರ ಚಿಂತೆಗಳು
ಈಗೇನು ಬೇಗ ಹೇಳು ಮುಸ್ಲಿಮಳಾದರೆ ಬುರ್ಖಾ
ಹಿಂದೂ ಆದರೆ ರಾಮನಾಮ ಕ್ರಿಶ್ಚಿಯನ್ ಆದರೆ
ಚರ್ಚು ಅನ್ನಬೇಕು ತಾನೇ?

ಅನ್ನುತ್ತೇನೆ ಹೋಗು ಸುಮ್ಮನೆ
ಹೆಪ್ಪಿಗೆ ಬಂದವರು ಹಸುವಿನ ಬೆಲೆ ಕೇಳಬಾರದು
ತಪ್ಪಿಗೆ ತಡಕುವವರು ಮೊಲೆ ನೋಡಬಾರದು

೨

## ಸನಾತನಿಯ ಜೊತೆ ಸಂವಾದ

ಸುಂದರ ಪದ್ಯ ಬರೆಯಬೇಕೆಂದು ನಿರ್ಧರಿಸಿದ ದಿನವೇ
ಮಸೀದಿ ಉರುಳಿಸಿ ಬುಡನ್ ಸಾಹೇಬರ ದರ್ಗಾಗೆ
ಕೇಸರಿ ಹೊದಿಸಿ ವೈಕುಂಠ ಏಕಾದಶಿಯ ದಿನ
ಹೆಚ್ಚಿನ ಪೊಲೀಸ್ ಬಂದೋಬಸ್ತ್ ಎಲ್ಲ ನಡೆದು

ಸಾಯಂಕಾಲದ ಹೊತ್ತಿಗೆ ಬೇಸರದಲ್ಲಿ ಬಿಯರ್ ಕುಡಿದು
ರಾತ್ರಿ ಕೇಳಿಗೆ ಕರೆದರೆ ಹೇಳುತ್ತಿದ್ದೀಯಾ

ರಾಹುಕಾಲದಲ್ಲಿ ಏನನ್ನೂ ಮಾಡಬಾರದು
ಮೈಲಿಗೆಯಲ್ಲಿ ಮಾತನ್ನೂ ಆಡಬಾರದು

## ಬಾಲ್ಕನಿಯಲ್ಲಿ ಬಟ್ಟೆ ಒಣಗಲು ಹಾಕುತ್ತಿರುವ ಹುಡುಗ

ಒದರಿ ಹಾಕುವುದನ್ನು ಯಾರಾದರೂ ಹೇಳಿಕೊಟ್ಟರೋ ಅಥವಾ
ತಾನಾಗಿ ಬಂದಿದ್ದೋ ಅಂತೂ ಝಾಡಿಸಿ, ಸರಿಯಾಗಿ ಹರಡಿ ಹಾಕುತ್ತಿದ್ದಾನೆ
ಜೊತೆಗೆ ಬಣ್ಣ ಬಣ್ಣದ ಕ್ಲಿಪ್ ಸಿಕ್ಕಿಸಿ ಜೋಪಾನ ಮಾಡುತ್ತಿದ್ದಾನೆ.
ಪ್ಯಾಂಟ್ ಶರಟು ಲುಂಗಿ ಟವಲು ಸ್ವಲ್ಪ ಸವೆದ ಬನೀನು ಮತ್ತು
ಚಡ್ಡಿ

೨

ಹಿಂದಿನ ದಿನದ ಕೊಳೆಯನ್ನೆಲ್ಲ ಒದರುತ್ತಾ
ಬಿಸಿಲಿಗೆ ಕೊಟ್ಟುಕೊಳ್ಳುತ್ತಾನೆ ಮೈಯನ್ನೂ

ಜೊತೆಗೆ ಅಕ್ಕಪಕ್ಕದ ಹತ್ತಾರು ಕಾಡಿಗೆ ಕಣ್ಣುಗಳಿಗೂ

# ಒಲೆಯ ಮೇಲೆ ಅನ್ನ ಕುದಿಯುತ್ತಿದೆ

## ಪ್ರಣವ

ಲೇಖಕಿ : ವಸಂತ ಕಲ್‌ಬಾಗಲ್
ಬೆಲೆ : **ರೂ. 55/-** **ಪುಟ : 88**
ಪ್ರಕಾಶನ : ಸ್ವಾತಿ ಪ್ರಕಾಶನ, 208, ದೀಪದರ್ಶಿನಿ, ಸಿಎಫ್‌ಟಿಆರ್‌ಐ ಕಾಲೋನಿ, ಬೋಗಾದಿ 2ನೇ ಹಂತ, ಮೈಸೂರು - 570 024

## ಉತ್ತರವಿರದ ಪ್ರಶ್ನೆಗಳು

ಲೇಖಕಿ : ಡಿ.ಸಿ. ಗೀತಾ
ಬೆಲೆ : **ರೂ. 30/-** **ಪುಟ : 64**
ಪ್ರಕಾಶನ : ಸುಮುಖ ಬುಕ್ ಹೌಸ್, 174ಇ/28, 1ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂ-23

## ಹವಳ ಹಾರಿದ ಹೊತ್ತು

ಲೇಖಕಿ : ಸ. ಉಷಾ
ಬೆಲೆ : **ರೂ. 50/-** **ಪುಟ : 92**
ಪ್ರಕಾಶನ : ಅಭಿನವ, 17/18-2, 1ನೇ ಮುಖ್ಯರಸ್ತೆ ಮಾರೇನಹಳ್ಳಿ, ವಿಜಯನಗರ, ಬೆಂ - 40

ಕನ್ನಡದಲ್ಲಿ ಕವಿಗಳಿಗಿಂತ ಕವಯತ್ರಿಯರೇ ಹೆಚ್ಚು ಸಶಕ್ತವಾಗಿ ಕವಿತೆ ರಚಿಸುತ್ತಿದ್ದಾರೆ ಎನ್ನುವ ಮಾತು ಆಗಾಗ ಕೇಳಿಬರುತ್ತದೆ. ಈ ಮಾತು ಕೊಂಚ ಮಟ್ಟಿಗೆ ನಿಜ ಕೂಡ. ಈಚಿನ ವರ್ಷಗಳ ಒಟ್ಟಾರೆ ಕಾವ್ಯದ ಕುಯಿಲಿನಲ್ಲಿ ಗಟ್ಟಿ ತೆನೆಗಳ ಫಸಲು ತೆಗೆದವರಲ್ಲಿ ಮಹಿಳೆಯರೇ ಮುಂದು. ಅನೇಕ ಕವಯತ್ರಿಯರು ಅಳುಕಿಲ್ಲದ ಗಟ್ಟಿ ದನಿಯಲ್ಲಿ ಪದ್ಯ ಬರೆಯುತ್ತ, ಹೊಸ ನಿರೀಕ್ಷೆಗಳನ್ನು ಹುಟ್ಟಿಸಿರುವ ಸಂದರ್ಭವಿದು. ಇದೇ ಭರವಸೆಯ ವ್ಯವಸಾಯದ ನಿರೀಕ್ಷೆಯಲ್ಲಿ ವಸಂತ ಕಲ್‌ಬಾಗಲ್‌ರ 'ಪ್ರಣವ', ಡಿ.ಸಿ. ಗೀತಾ ಅವರ 'ಉತ್ತರವಿರದ ಪ್ರಶ್ನೆಗಳು'; ಸ. ಉಷಾ ಅವರ 'ಹವಳ ಹಾರಿದ ಹೊತ್ತು' ಕವನ ಸಂಕಲನಗಳ ಕವಿತೆಗಳನ್ನು ಮತ್ತೆ ಮತ್ತೆ ಓದಿದಾಗ ಖುಷಿ ಹಾಗೂ ನಿರಾಶೆ ಒಟ್ಟಿಗೇ ಉಂಟಾಗುತ್ತದೆ.

ವಸಂತ ಕಲ್‌ಬಾಗಲ್‌ರ 'ಪ್ರಣವ' ನಿರಾಶೆ ಹುಟ್ಟಿಸುವ ಸಂಕಲನ. ತುಂಡನೆಯ, ಉದ್ದನೆಯ, ತಮಾಷೆಯ, ವಿಷಾದದ, ಆಟೋಗ್ರಾಫ್ ಪುಸ್ತಕಗಳಲ್ಲಿ ಬರೆಯುವಂಥ ಸುದ್ದಿಕಾವ್ಯದ ರೀತಿಯ, ಮಹಿಳೆಯ ಅಳಲಿನ, ಪ್ರಾಸಕ್ಕೆ ಪ್ರಾಸ ಜೋಡಿಸುವ ತ್ರಾಸದ ರೀತಿಯ ಕವಿತೆಗಳು ಈ ಸಂಕಲನದಲ್ಲಿವೆ. ಆದರೆ, ಪುಸ್ತಕ ಮುಚ್ಚಿಟ್ಟ ನಂತರ ಯಾವ ಪದ್ಯವೂ ನೆನಪಿನಲ್ಲಿ ಉಳಿಯುವುದಿಲ್ಲ.

ಕವಯತ್ರಿ ಎಂದ ಮೇಲೆ ಮಹಿಳಾವಾದ ಇಲ್ಲದಿದ್ದರೆ ಹೇಗೆ? ಕಲ್‌ಬಾಗಲ್ ಅವರ ಕವಿತೆಗಳಲ್ಲೂ ಮಹಿಳಾವಾದ ಪ್ರತಿಪಾದಿಸುವ, ಮಹಿಳೆಯರ ಗೋಳುಗಳನ್ನು ತೋಡಿಕೊಳ್ಳುವ ಪದ್ಯಗಳಿವೆ. ಆದರೆ ಕವಯತ್ರಿ ಮಾನಸಿಕವಾಗಿ ಮಾಹಿತಿ ತಂತ್ರಜ್ಞಾನ ಯುಗಕ್ಕೆ ಹೊಂದಿಕೊಂಡಂತಿಲ್ಲ. 'ಆ ಮೂರು ದಿನಗಳು' ಎನ್ನುವ ಕವಿತೆಯ ಮೂರು ಸಾಲುಗಳನ್ನು ಗಮನಿಸಿ :

ರಜೆಯ ಮೂರು ದಿನಗಳ ತನಕ
ಸುತ್ತು ಕೆಲಸಕ್ಕೆ ವಿರಾಮ ಒಳಹೊರಗೂ
ಈ ಕೇರ್‌ಫ್ರೀ ದಿನಗಳಲ್ಲಿ ಇಲ್ಲವೆಂಬ ಕೊರಗು.

ಮಹಿಳೆಯ ಮಾಸಿಕ ಋತುಸ್ರಾವದ ಮೂರು ದಿನಗಳ ಬಗ್ಗೆ ಬರೆಯುವ ಕಲ್‌ಬಾಗಲ್ ಅವರ ಧೋರಣೆಯಾದರೂ ಎಂಥದು? ಕತ್ತಲಿನ ಮೂಲೆಯಲ್ಲಿ ಕೂರುತ್ತಿದ್ದ ಹೆಣ್ಣು ಕೇರ್‌ಫ್ರೀ ದಿನಗಳಲ್ಲಿ ಸ್ವಾತಂತ್ರ್ಯದ ಬೆಳಕಿನಲ್ಲಿ ನಿರಾಳವಾಗಿದ್ದಾಳೆ ಎನ್ನುವ ಧೋರಣೆಯ ಸಂದರ್ಭದಲ್ಲಿ ಕಳೆದುಹೋದ ದಿನಗಳ ಬಗ್ಗೆ ಕೊರಗುವುದು ಎಷ್ಟರಮಟ್ಟಿಗೆ ಔಚಿತ್ಯಪೂರ್ಣ?

ಪತ್ರಿಕೆಯೊಂದರಲ್ಲಿ 'ಸುದ್ದಿ ಕಾವ್ಯ' ಎನ್ನುವ ಕಾಲಂ ಬರೆಯುತ್ತಿದ್ದ, ಅದೇ ಹೆಸರಿನ ಸಂಕಲನ ಪ್ರಕಟಿಸಿರುವ ಕಲ್‌ಬಾಗಲ್ ತಮ್ಮ ಪದ್ಯಗಳನ್ನು ವಿಪರೀತ ವಾಚ್ಯಗೊಳಿಸುತ್ತಾರೆ. ಪ್ರಾಸ ಹೊಂದಿಸುವ ಸಂಭ್ರಮದಲ್ಲಿ ಕಾವ್ಯ ಮರೆಯುತ್ತಾರೆ. ಈ ಕಾರಣದಿಂದಾಗಿಯೇ 'ದುಂಡಿ'ಯಂಥ ಓದಿಸಿಕೊಳ್ಳ ಬಹುದಾದ ಕವಿತೆಯೂ ಬೋರ್ ಅನ್ನಿಸಿಬಿಡುತ್ತದೆ. ಈ ದೂರುಗಳ ನಡುವೆಯೂ ಸಂಕಲನದಲ್ಲಿನ 'ನನ್ನ ಚಿತ್ರಪಟ', 'ಬಹುಪರಾಕ್', 'ಒಮ್ಮತ', 'ಉಳಿದುಬಿಟ್ಟವರು' ಕವಿತೆಗಳು ಖುಷಿ ಕೊಡುತ್ತವೆ.

★

'ಉತ್ತರವಿಲ್ಲದ ಪ್ರಶ್ನೆಗಳು' ಡಿ.ಸಿ. ಗೀತಾ ಅವರ ಚೊಚ್ಚಲ ಕವನ ಸಂಕಲನ. ಹನ್ನೆರಡು ವರ್ಷಗಳಲ್ಲಿ ಬರೆದ ಕವನಗಳ ಸಂಕಲನವಿದು ಎಂದು ಗೀತಾ ಬರೆದುಕೊಂಡಿದ್ದಾರೆ. ಕವಿ ಎಸ್.ಜಿ. ಸಿದ್ದರಾಮಯ್ಯ, 'ಇವರ ಕವಿತೆಗಳಲ್ಲಿ ನೆಲಮುಗಿಲ ಸೆಳೆತವಿದೆ. ಅದ್ವೈತ ಪರಿಭಾವನೆಯಲ್ಲಿ ಆ ಸೆಳೆತದ ಫಲಿತವಿದೆ. ಇದು ಇಲ್ಲಿನ ಸಂವೇದನೆಯಾಳದ ಸಾಕ್ಷಿ ಪ್ರಜ್ಞೆಯ ಸ್ಥಿತಿಯನ್ನು ಕುರಿತು ಹೇಳಿದ ಮಾತು. ಆದರೆ ಈ ಸಾಕ್ಷಿ ಪ್ರಜ್ಞೆಗೆ ಮುಖಾಮುಖಿಯಾಗಿರುವ ಜೀವವಾದರೋ ನೆಲಮುಗಿಲನ್ನು ಬೇರೆಬೇರೆಯಾಗಿಯೇ ಗಣಿಸಿ, ಒಂದನ್ನು ಬಿಟ್ಟು ಇನ್ನೊಂದರ ಕಡೆಗೆ ನಡೆಯುವುದು. ಜೀವದ ಈ ದ್ವೈತದ ಕಾರಣದಿಂದಾಗಿ ಸಾಕ್ಷಿಭಾವ ಕಳೆದುಕೊಳ್ಳುವುದು ಅಪಾರವನ್ನು, ಅನುಭವಿಸುವುದು ನಿರಾಶೆಯನ್ನು. ಈ ಸ್ಥಿತಿಯನ್ನು ಬಹುತೇಕ ಕವನಗಳು ಕಟ್ಟಿಕೊಡುತ್ತವೆ' ಎಂದು ಬರೆದಿದ್ದಾರೆ. ಈ ಮುನ್ನುಡಿಗಿಂತಲೂ ಸುಲಭವಾಗಿ ಗೀತಾ ಅವರ ಪದ್ಯಗಳು ಅರ್ಥವಾಗುತ್ತವೆ.

ಗೀತಾ ಕೂಡ ರೂಪಕಗಳಿಗಾಗಿ ಪುರಾಣ-ಚರಿತ್ರೆಯತ್ತ ಹೊರಳಿದ್ದಾರೆ. ಆದರೆ ಇಂಥ ಕವಿತೆಗಳಿಗಿಂತ ಸಂಕಲನದಲ್ಲಿನ ಕೆಲವು ಪುಟ್ಟ ಕವಿತೆಗಳು (ವಿಶೇಷವಾಗಿ ಸೂರ್ಯನ ಕುರಿತ ಕವಿತೆಗಳು) ಖುಷಿ ಕೊಡುತ್ತವೆ. ಎರಡು ಸ್ಯಾಂಪಲ್ ನೋಡಿ:

ಹಗಲೆಲ್ಲ ಉರಿದುರಿದು
ಸೆಖೆ ತಾಳಲಾಗದೆ
ತಣ್ಣೀರ ಮೀಯಲೆಂದು
ನಮ್ಮೂರ ಕೆರೆಯಲ್ಲಿ ಮುಳುಗಿದ.

*

ಹಗಲೆಲ್ಲ ಸುಮ್ಮಸುಮ್ಮನೇ
ಉರಿದುರಿದು ಬೀಳುವ
ರಾತ್ರಿಯಿಡೀ ಎಲ್ಲೋ
ಮಾಯವಾಗಿ ಬಿಡುವವನ
ಸಹವಾಸ ಸಾಕಾಗಿ ಹೋಗಿದೆ.

ಸಂಕಲನದಲ್ಲಿ 'ಯಾರು?' ಹಲವು ಅರ್ಥ ಸಾಧ್ಯತೆಗಳ ಕವಿತೆ. ವಿನಾಕಾರಣ ಹಾದಿ ಕಾಯುವುದು, ಅದರ ನಿರರ್ಥಕತೆಯ ಬಗ್ಗೆ ಬರೆಯುತ್ತಾ –

ಕಾಯಬೇಕೇಕೆ?
ಕಣ್ಣಂಚು ಮಾತ್ರ ಇನ್ನೂ ಚಿಲಕವಿಕ್ಕಿದ
ಕದದೆಡೆಗೇ
ಈಗ ಸದ್ದಿರದ ಹೆಜ್ಜೆಗಳು
ಒಳಗೇ ಬಂದಂತಾಗಿ
ಮುಚ್ಚಿದ ಕದ ತಳ್ಳದೆ
ಒಳಬಂದವರು
ಯಾರು?

ಎಂದು ಗೀತಾ ಕವಿತೆ ಮುಗಿಸುತ್ತಾರೆ. ಇಲ್ಲಿನ ಕಾಯುವಿಕೆಯಾದರೂ ಯಾರಿಗಾಗಿ? ಕಾವ್ಯಕ್ಕಾಗಿಯಾ? ಬಂದದ್ದು ಕವಿತೆಯಾ? ಇಂಥ ಪ್ರಶ್ನೆಗಳ ಕಾರಣಕ್ಕಾಗಿಯೇ ಕವಿತೆ ಇಷ್ಟವಾಗುತ್ತದೆ.

★

ಗೀತಾ ಹಾಗೂ ಕಲ್‌ಬಾಗಲ್ ಅವರಿಗೆ ಹೋಲಿಸಿದರೆ ಸ. ಉಷಾ ಹಿರಿಯ ಹಾಗೂ ಪಳಗಿದ ಕವಯತ್ರಿ. ಅವರ ಮೊದಲೆರಡು ಸಂಕಲನಗಳಾದ 'ತೊಗಲಗೊಂಬೆಯ ಆತ್ಮಕಥೆ' ಹಾಗೂ 'ಈ ನೆಲದ ಹಾಡು' ಕಾವ್ಯಾಸಕ್ತರಲ್ಲಿ ಮೂಡಿಸಿದ್ದ ನಿರೀಕ್ಷೆಯನ್ನು 'ಹವಳ ಹಾರಿದ ಹೊತ್ತು' ಹುಸಿಗೊಳಿಸುವುದಿಲ್ಲ. ಕವಯತ್ರಿಯ ಬೆಳವಣಿಗೆಗೆ ಈ ಸಂಕಲನ ಸಾಕ್ಷಿಯಂತಿದೆ.

'ರುರು ಪ್ರಮದಾ ಪ್ರೀತಿ', 'ಕನ್ನಿಕೆಯರ ಹಾಡುಗಳು' ಹಾಗೂ 'ನೆರೆಮನೆಯಾಕೆಯ ಹಾಡು' ಎನ್ನುವ ಮೂರು ಭಾಗಗಳಲ್ಲಿ ಸಂಕಲನದ ಕವಿತೆಗಳು ಹಂಚಿಹೋಗಿವೆ. ಮೊದಲ ಭಾಗದ ಕವಿತೆಗಳು ಕವಯತ್ರಿಯ ವಿವಿಧ ಆಶಯ-ಧೋರಣೆಗಳನ್ನು ಪ್ರತಿನಿಧಿಸಿದರೆ, ಎರಡನೇ ಭಾಗದ ಕವಿತೆಗಳು ಮಹಿಳೆಯಾಗಿ ಉಷಾ ಅವರ ಕವಿತೆಗಳು. 'ನೆರೆಮನೆಯಾಕೆ ಹಾಡು' ಎನ್ನುವ ಮೂರನೇ ಭಾಗ ಹೆಸರೇ ಸೂಚಿಸುವಂತೆ ಅನುವಾದಿತ ಕವಿತೆಗಳ ಗುಚ್ಛ. ಮೂವರು ಮಲೆಯಾಳಂ ಕವಯತ್ರಿಯರ ಕವಿತೆಗಳ ಭಾವಾನುವಾದ ಇಲ್ಲಿದೆ.

ಇತರ ಕವಿತೆಗಳಂತೆ ಉಷಾ ಕೂಡ ರೂಪಕಗಳಿಗಾಗಿ ಪುರಾಣದ ಮೊರೆ ಹೋಗುತ್ತಾರೆ; ಕಡಲಾಳದ ಜೀವ ವೈವಿಧ್ಯವನ್ನೂ ತಡಕಾಡುತ್ತಾರೆ. ಈ ಒದ್ದಾಟವನ್ನು ವರ್ತಮಾನಕ್ಕೆ ಹೊಂದಿಸುವಲ್ಲಿ ಉಷಾ ಅವರ ಕಾವ್ಯದ ಯಶಸ್ಸಿದೆ. ಅವರ ಕೆಲವು ಕವಿತೆಗಳ ಓದಾದರೂ 'ಸದ್ಯದ ಪದ್ಯ' ಅನ್ನಿಸುತ್ತದೆ. ಇಂಥದೊಂದು ಕವಿತೆ 'ನಚಿಕೇತ ಮತ್ತು ನಾನು'.

ಕೋಪಿಷ್ಟ ಅಪ್ಪನ ಆದೇಶದ ಮೇರೆಗೆ ಯಮನಗರಿಗೆ ತೆರಳಿ ಯಮನ ಅನುಗ್ರಹಕ್ಕೆ ಪಾತ್ರವಾಗುವ ನಚಿಕೇತನದು ಪ್ರಸಿದ್ಧ ಪುರಾಣ ಕಥೆ. ಈ ಕಥೆಯ ಮತ್ತೆ ಹೇಳುವ ಉಷಾ, ಕೊನೆಗೆ ತಲುಪುವುದು:

ನಾನೋ ಈ ನೆಲದ ಮಗಳು
ಅನ್ನಮಯ ಕೋಶದ
ಸ್ಥಗಿತ ಜೀವ
ಒಮ್ಮೆಯೂ ಕೇಳಲಿಲ್ಲ
ಕಾಲನ ಕಣ್ಣಲ್ಲಿ ಕಣ್ಣಿಟ್ಟು
ನಾ ಬಂದುದೆಲ್ಲಿಂದ ಹೋಗುವುದೆಲ್ಲಿಗೆ
ಎಂದು
ನಿನ್ನ ಕಣ್ಣಲ್ಲಿ ಕಣ್ಣಿಡಲು ಸವುಡಿಲ್ಲ ತಂದೆ
ಒಲೆಯ ಮೇಲೆ ಅಕ್ಕಿ ಕುದಿಯುತ್ತಿದೆ ಇರು
ಇದೋ ಬಂದೆ.

ಇಂದಿನ ಬದುಕಿನ ತವಕ, ತಲ್ಲಣಗಳನ್ನು ಹಿಡಿದಿಡಲಿಕ್ಕೆ ಒಲೆಯ ಮೇಲೆ ಕುದಿಯುತ್ತಿರುವ ಅಕ್ಕಿಯ ರೂಪಕ ಅದ್ಭುತವಾಗಿ ಧ್ವನಿಸುತ್ತದೆ.

ಉಷಾ ಅವರ ಮಹಿಳಾವಾದ ಕೂಡ ಉದಾರವಾದುದು. ಈ ಉದಾರತೆ 'ರುರು ಪ್ರಮದಾ ಪ್ರೀತಿ'ಯಲ್ಲಿ ನಿಚ್ಚಳವಾಗಿದೆ. ನಾಗವಿಷಕ್ಕೆ ಬಲಿಯಾದ ಪ್ರಮದೆಯನ್ನು ಅರ್ಧಾಯುಷ್ಯ ಕೊಟ್ಟು ಬದುಕಿಸಿಕೊಂಡ ರುರು ಕವಯತ್ರಿಯ ಪಾಲಿಗೆ ಲಿಂಗಭೇದ ಮೀರಿದ ಪ್ರೇಮದ ಸಂಕೇತ.

'ಪುಟ್ಟ ಹುಡುಗ ಮತ್ತು ಪಾಷಾಣ ಮೋಹಿನಿ', 'ಹವಳ ಹಾರಿದ ಹೊತ್ತು', 'ಅರಸಿಯ ಕೆರೆಯ ನೀರು' ಸಂಕಲನದ ಉತ್ತಮ ಕವನಗಳು. ಸಂಕಲನಕ್ಕೆ ಮುನ್ನುಡಿ ಬರೆದಿರುವ ಎಚ್.ಎಸ್. ಶಿವಪ್ರಕಾಶ್, 'ನಾನು ಕಂಡ ಕನ್ನಡದ ಕಾವ್ಯ'ದ ಒಂದು ಮುಖ್ಯ ಮೈಲಿಗಲ್ಲು ಎಂದು ಉದಾರ ಮನೋಭಾವ ತೋರಿದ್ದಾರೆ.

ಕಲ್‌ಬಾಗಲ್ ಹಾಗೂ ಗೀತಾ ಅವರಿಗೆ ಕವಿತೆಯ ಶಿಲ್ಪ ರಚಿಸುವ ಗುಟ್ಟು ಗೊತ್ತು. ರಚಿಸಿದ ಶಿಲ್ಪಕ್ಕೆ ಪ್ರಾಣ ಪ್ರತಿಷ್ಠಾಪನೆ ಮಾಡುವ ನಿಟ್ಟಿನಲ್ಲಿ ಇಬ್ಬರೂ ಸೋಲುತ್ತಾರೆ. ಆದರೆ ಉಷಾ ಅವರಿಗೆ ಪ್ರಾಣ ಪ್ರತಿಷ್ಠಾಪನೆಯ ಮಾಂತ್ರಿಕತೆಯೂ ಸಿದ್ಧಿಸಿದೆ. ಆ ಕಾರಣಕ್ಕಾಗಿಯೇ 'ಹವಳ ಹಾರಿದ ಹೊತ್ತು' ಸಂಕಲನದ ಕೆಲವು ಕವಿತೆಗಳ ಗುಂಗು ಪುಸ್ತಕ ಮರಳಿ ಕಪಾಟು ಸೇರಿದ ನಂತರವೂ ಕಾಡುತ್ತಿರುತ್ತದೆ.

◆ ಚ.ಹ. ರಘುನಾಥ
ಉಪಸಂಪಾದಕ, ಪ್ರಜಾವಾಣಿ
೭೧, ಎಂ.ಜಿ. ರಸ್ತೆ, ಬೆಂಗಳೂರು -೫೬೦ ೦೦೧

# ಪರಿಶುದ್ಧ ಅಂತರ್ಯದ ಉಜ್ವಲ ಬರಹ




## ಎಲ್ಲ ಬಲ್ಲವರಿಲ್ಲ

ಲೇಖಕ : ಎಚ್.ವೈ. ಶಾರದಾಪ್ರಸಾದ್
(ಸಂಪಾದಕ: ಪ್ರಭುಶಂಕರ)

ಬೆಲೆ : **ರೂ. 75/-** **ಪುಟ : 142**

ಪ್ರಕಾಶನ : ಅಭಿನವ, 17/18-2, 1ನೇ ಮುಖ್ಯರಸ್ತೆ
ಮಾರೇನಹಳ್ಳಿ, ವಿಜಯನಗರ, ಬೆಂ - 40
ದೂ: 080-23505825

ಬರೆಯುವವನಿಗೂ ಸಹೃದಯನಿಗೂ ಸಂತೋಷ ಸಿಗಬೇಕೆಂದರೆ ಲೇಖಕನೊಬ್ಬನ ಬರಹಗಳು ಕಾಲಾತೀತವಾಗಿರಬೇಕು ಅಥವಾ ತ್ರಿಕಾಲಾಬಾಧಿತವಾಗಿರಬೇಕು. ಬರೆದಿದ್ದರಲ್ಲಿ ಹೆಚ್ಚಿನದು ಹೀಗಾಗಬೇಕೆಂದರೆ ಅದರಲ್ಲಿ ಅಪೂರ್ವ ಉಜ್ವಲತೆ ಇರಬೇಕು. ಬೇಂದ್ರೆ, ಅಡಿಗರು, ಕೆಎಸ್‌ನ, ಸು.ರಂ. ಎಕ್ಕುಂಡಿ ಅವರ ಕವಿತೆಗಳು ಇದಕ್ಕೆ ಉದಾಹರಣೆ. ಹಾಗೆಯೇ ಡಿವಿಜಿ, ಗೊರೂರು, ಎ.ಆರ್. ಕೃಷ್ಣಶಾಸ್ತ್ರಿ ಅನಂತಮೂರ್ತಿ, ಜಯಂತ ಕಾಯ್ಕಿಣಿ, ಡಿ.ಆರ್. ನಾಗರಾಜ್ ಮತ್ತು ಲಂಕೇಶರ ಕೆಲ ಟೀಕೆ-ಟಿಪ್ಪಣಿಗಳ ಗದ್ಯದ ಸೊಗಸು ಅನನ್ಯ. ನಾವು ನಮಗೆ ಇಷ್ಟವಾಗುವ ಬರಹದ ಬಗ್ಗೆ ಒಳನೋಟ, ತೀಕ್ಷ್ಣತೆ, ಭಾವತೀವ್ರತೆ, ವಸ್ತು ನಿಷ್ಠತೆ, ನಿಷಿತಮತಿ, ಹರಿತಭಾಷೆ, ಅದರ ವರ್ಣನಾತ್ಮಕತೆ, ಲೇಖಕನಿಗಿರುವ ಎಚ್ಚರದ ಸ್ಥಿತಿಯ ಪ್ರತೀಕ... ಹೀಗೆ ಏನೆಲ್ಲಾ ಬಿಡಿಬಿಡಿಯಾಗಿ ಮಾತನಾಡುತ್ತೇವಲ್ಲ, ಅದೇ ಸಮಗ್ರವಾಗಿ ನೋಡಿದರೆ ಬರಹವೊಂದರ ಅನನ್ಯ ಉಜ್ವಲತೆ.

ಹಾಗೆ ನೋಡಿದರೆ ಇಂಥ ಕಾಂತಿ ತುಸು ಸುಲಭವಾಗಿ ದಕ್ಕುವುದು ಕಾವ್ಯದಲ್ಲಿ. ನಮ್ಮ ವೈಚಾರಿಕತೆ, ಒಲವು-ನಿಲುವುಗಳನ್ನೆಲ್ಲ ಮೀರಿ ಕಾವ್ಯ ಒಂದು ರಮಣೀಯ ಕ್ಷಣದಲ್ಲಿ ಆಕೃತಿ ಪಡೆಯುವುದು ಇದಕ್ಕಿರುವ ಕಾರಣಗಳಲ್ಲಿ ಒಂದು. ಹೀಗಾಗಿ 'ಪೊಯೆಟ್ರಿ ಈಸ್ ನಥಿಂಗ್ ಬಟ್ ದಿ ಸ್ಪಾಂಟೇನಿಯಸ್ ಓವರ್ ಫ್ಲೋ ಆಫ್ ಪವರ್‌ಫುಲ್ ಫೀಲಿಂಗ್ಸ್' ಎಂದ ವಿಲಿಯಂ ವರ್ಡ್ಸ್‌ವರ್ತ್‌ನ ಮಾತು ಇವತ್ತಿಗೂ ಅಬಾಧಿತ. ಇನ್ನೊಂದು ಬಗೆಯಿಂದ ನೋಡಿದರೆ ಒಂದು ಸಾಹಿತ್ಯ ಕೃತಿ ಕುರಿತೋ, ಸಾಹಿತ್ಯ ಸಿದ್ಧಾಂತ ಕುರಿತೋ ಬರೆಯುವಾಗ ಲೇಖಕನೊಬ್ಬ ಅನುಭವಿಸುವ ತಳಮಳ ಮತ್ತು ಅಂತರ್ಯದ ಕೋಲಾಹಲಗಳಿಗೆ ತಕ್ಕಂತೆ ಬರಹ ಉಜ್ವಲತೆಯನ್ನು ದಕ್ಕಿಸಿಕೊಳ್ಳುತ್ತದೆ. ಇಂಥ ಉಜ್ವಲತೆ ಕಾಣಬೇಕೆಂದರೆ ಡಿ.ಆರ್. ನಾಗರಾಜರ, 'ಸಾಹಿತ್ಯ ಕಥನ' ಮತ್ತು 'ಸಂಸ್ಕೃತಿ ಕಥನ'ಗಳನ್ನು ಓದಬೇಕು. ಬರಹ ಪೇಲವವಾಗಿದೆಯೆಂದರೆ, ಆ ಲೇಖಕ ಮೇಲುಮೇಲಿನ ಸ್ತರದಲ್ಲಷ್ಟೆ ವಿಹರಿಸಿದ್ದಾನೆ ಎಂದೇ ಅರ್ಥ. ಯಾವುದೋ ಒಂದು ದಿನಪತ್ರಿಕೆಯಲ್ಲೋ/ವಾರಪತ್ರಿಕೆಯಲ್ಲೋ ನಿಯಮಿತವಾಗಿ ಅಂಕಣ ಬರೆಯುವವನ ಸಮಸ್ಯೆ ಕೂಡ ಇದೇ. ಇಂತಿಷ್ಟೇ ಪದಗಳಲ್ಲಿ ಬರೆಯಬೇಕೆಂಬ ಷರತ್ತಿಗೆ ಕಟ್ಟುಬೀಳುವ ಲೇಖಕ ಇಲ್ಲಿ ಸಾಮಾನ್ಯವಾಗಿ ವಿಷದವಾಗಿ ಏನನ್ನೂ ಬರೆಯಲಾರ. ಹೆಚ್ಚಿನ ಲೇಖಕರು/ಪತ್ರಕರ್ತರ ವಿಷಯದಲ್ಲಿ ಇದು ಸತ್ಯ. ಇತ್ತೀಚೆಗೆ 'ಉದಯವಾಣಿ'ಯಲ್ಲಿ ಅನಂತಮೂರ್ತಿಗಳು ಬರೆಯುತ್ತಿರುವ

'ಋಜುವಾತು' ಅಂಕಣ ಇದಕ್ಕೆ ಅಪವಾದ. ಘನವಾದ ಆಸಕ್ತಿಗಳನ್ನೆಲ್ಲ ಕಳೆದುಕೊಂಡು, ಗಿಲೀಟು ಮಾತುಗಳ ಮಟ್ಟಕ್ಕೆ ಇಳಿದಿರುವ ಇವತ್ತಿನ ಪತ್ರಿಕೋದ್ಯಮದಲ್ಲಿ ಅನಂತಮೂರ್ತಿಗಳಿಗೆ ಒಂದೇ ವಿಷಯ ಕುರಿತು ೨-೩ ವಾರ ವಿಸ್ತೃತವಾಗಿ ಬರೆಯುವ ಸ್ವಾತಂತ್ರ್ಯ ಸಿಕ್ಕಿರುವುದು ನೆಮ್ಮದಿಯ ಸಂಗತಿ.

ಆದರೆ ಬರಹಗಾರನ ಸಮಸ್ಯೆಗಳು ಇನ್ನೂ ಒಂದಿಷ್ಟಿವೆ. ಸಾರ್ವಜನಿಕ ವಿಚಾರಗಳನ್ನು ಕುರಿತು ವಸ್ತುನಿಷ್ಠವಾಗಿ ಬರೆಯುವ ಲೇಖಕನೊಬ್ಬ ವ್ಯಕ್ತಿಗಳ ವಿಚಾರಕ್ಕೆ ಬಂದರೆ ಒಂದೋ ತೀರಾ ಉದಾರಿಯಾಗಿ ಬಿಡಬಹುದು ಅಥವಾ ಉದಾರಿಯಾಗುವ ಅಪಾಯದಿಂದ ತಪ್ಪಿಸಿಕೊಳ್ಳಬೇಕೆಂಬ ಸಂಕಟದಲ್ಲಿ ವಿಪರೀತ ಪೂರ್ವಗ್ರಹಪೀಡಿತನಾಗಬಹುದು. ಆದರೆ ಇವೆರಡೂ ತೀರಾ ಅಪಾಯಕಾರಿ ಲಹರಿಗಳು. ಅದರಲ್ಲೂ ಸಾರ್ವಜನಿಕ ಬದುಕಿನಲ್ಲಿ ಹೆಸರು ಮಾಡಿದವರ ಬಗ್ಗೆ ಬರೆಯುವಾಗ ಸತ್ಯ ಇವೆರಡು ಧ್ರುವಗಳ ಆಚೀಚೆಯೋ, ಮಧ್ಯದಲ್ಲೋ ಇರುತ್ತದೆ. ಅದನ್ನು ಕಂಡುಕೊಳ್ಳಬೇಕಾದ್ದು ಲೇಖಕನ ಧರ್ಮ. ಇಲ್ಲದಿದ್ದರೆ ಔದಾರ್ಯ ಮೈದುಂಬಿಕೊಂಡು ಬರೆದಿದ್ದೆಲ್ಲ 'ಬಯೋಡೇಟಾ ಸಾಹಿತ್ಯ' ಆಗುತ್ತದೆ. ಹಾಗೆಯೇ ಸಲ್ಲದ ಅನುಮಾನಗಳಿಂದ ಆವೃತವಾದ ಬರಹ ಅನಾರೋಗ್ಯಕರ ವಾತಾವರಣ ಸೃಷ್ಟಿಸಿಬಿಡುತ್ತದೆ. ಇಷ್ಟಕ್ಕೂ ಒಬ್ಬೇ ಲೇಖಕ ತಾನು ಹತ್ತಿರದಿಂದ ಕಂಡ ವ್ಯಕ್ತಿಗಳ ಬಗ್ಗೆಯೂ ಸಾರ್ವಜನಿಕ ಮಹತ್ವದ ವಿಚಾರಗಳ ಬಗ್ಗೆಯೂ ಬರೆಯುವುದು ಸವಾಲಿನ ಕೆಲಸ ಎಂಬುದರಲ್ಲಿ ಎರಡು ಮಾತಿಲ್ಲ.

ಹಾಗೆ ನೋಡಿದರೆ ಇದರಲ್ಲಿ ಗೆದ್ದವರು ನಮ್ಮ ಡಿವಿಜಿ. ಭಾಷೆ, ಸಂಸ್ಕೃತಿ, ರಾಮಾಯಣ, ಭಗವದ್ಗೀತೆಗಳನ್ನೆಲ್ಲ ಕುರಿತು ಅಪಾರವಾಗಿ ಬರೆದಿರುವ ಡಿವಿಜಿ ಅವರ ಹೆಗ್ಗಳಿಕೆ ಎಂದರೆ ಅವರು ನಮಗೆಲ್ಲ ಬಿಟ್ಟುಹೋಗಿರುವ 'ಜ್ಞಾಪಕ ಚಿತ್ರಶಾಲೆ'ಯ ಎಂಟು ಸಂಪುಟಗಳು. ಇದರಲ್ಲಿ ಅವರು ತಮ್ಮ ಪೂರ್ವಜರ ಊರಾದ ಮುಳಬಾಗಿಲಿನ ನೆನಪುಗಳಿಂದ ಹಿಡಿದು ಮೈಸೂರು ದಿವಾನರವರೆಗೆಲ್ಲ ಬರೆದಿದ್ದಾರೆ. ಅಲ್ಲಿ 'ಬಂಡಿ ರಸೂಲ್ ಖಾನ್' ಇದ್ದಂತೆಯೇ 'ಪರಿಶುದ್ಧ ಪಾಂಡಿತ್ಯದ ಹಿರಿಯಣ್ಣ'ನವರಿದ್ದಾರೆ; 'ದಿವಾನ್ ರಂಗಾಚಾರ್ಲು' ಥರವೇ 'ಮಾಗಡಿಯ ಕರಣಿಕರು' ಇದ್ದಾರೆ; 'ಧರ್ಮಪ್ರಕಾಶ ಸಜ್ಜನರಾವ್' ಅವರಂತೆಯೇ 'ಬಳ್ಳಾರಿಯ ನಾಟಕ ಕಂಪನಿ'ಗಳಲ್ಲಿ ಕಂಡುಬಂದ ಅನೇಕರ ಚಿತ್ರಣಗಳಿವೆ. ಹೀಗೆ ಅವರು ತಮ್ಮ ಸಂಪರ್ಕಕ್ಕೆ ಬಂದ, ತಮ್ಮ ಮೇಲೆ ಪ್ರಭಾವ ಬೀರಿದ, ಸಮಾಜಕ್ಕೆ ಉಪಕರಿಸಿದ, ಸಾರ್ವಜನಿಕ ಜೀವನದಲ್ಲಿದ್ದ ವ್ಯಕ್ತಿಗಳ ಬಗ್ಗೆ ಬರೆದಿದ್ದನ್ನೆಲ್ಲ ಒಟ್ಟು ಮಾಡಿದರೆ ಅದೇ ಒಂದು ಮಹಾ ಸಂಪುಟವಾಗುತ್ತದೆ. ಡಿವಿಜಿ ಇನ್ನೇನನ್ನೂ ಬರೆಯದೇ ಬರೀ 'ಜ್ಞಾಪಕ ಚಿತ್ರಶಾಲೆ'ಯನ್ನಷ್ಟೇ ಬರೆದಿದ್ದರೂ ಅವರು ಕಾಲಾತೀತವಾದ ಪ್ರತಿಭಾನ್ವಿತರೆಂದೇ ನೆನಪಿಗೆ ಬರುತ್ತಿದ್ದರು. ಏಕೆಂದರೆ ಈ ಸಂಪುಟಗಳಲ್ಲಿರುವುದು ಕೇವಲ ಅವರಿವರ ಪರಿಚಯವಲ್ಲ; ಮುಖಸ್ತುತಿಯೂ ಅಲ್ಲ. ಅದು ಒಂದು ಕಾಲದ ಸಮಾಜದ ವಿಶ್ವರೂಪ ದರ್ಶನ. ಈ ಬರಹಗಳಲ್ಲಿ ಎದ್ದು ಕಾಣುವುದು ಕನ್ನಡದ ಅತ್ಯುತ್ತಮ ಮನಸ್ಸೊಂದು ಚಿಂತಿಸಿರುವ ಪರಿ.

ಹೀಗೆಯೇ ನೆನಪಿಸಿಕೊಂಡರೆ 'ವ್ಯಕ್ತಿ ವಿಚಾರ' ಬರೆದವರಲ್ಲಿ ಎಚ್ಚೆಸ್ಕೆ, ಹಾಮಾನಾ 'ಸುಧಾ' ವಾರಪತ್ರಿಕೆಯಲ್ಲಿ ದಶಕಗಳಷ್ಟು ಕಾಲ ಬರೆಯುತ್ತಿದ್ದ ಅಂಕಣಗಳು, ಗೊರೂರರ 'ರಸಘಳಿಗೆ', 'ಕನ್ನಡಪ್ರಭ' ಸಂಪಾದಕರಾಗಿದ್ದಾಗ ಖಾದ್ರಿ ಶಾಮಣ್ಣ ಬರೆದಿರುವುದು ಮತ್ತು ಕೆ. ಸತ್ಯನಾರಾಯಣ ಈಗಲೂ ಪ್ರತಿ ಭಾನುವಾರ ಬರೆಯುತ್ತಿರುವ ಅಂಕಣಗಳು ನೆನಪಾಗುತ್ತವೆ.

ಇಲ್ಲಿ ಮನಮುಟ್ಟುವಂತೆ ಬರೆಯುವ ಎಚ್ಚೆಸ್ಕೆ ಅವರ ಮಿತಿಯೆಂದರೆ ಅವರು ತೋರಿಸುವ

ಸೀಮಾತೀತ ಔದಾರ್ಯ. ಅವರು ಚಿಕ್ಕ ಚಿಕ್ಕ ನುಡಿಗುಚ್ಛಗಳಲ್ಲಿ ಸಾವಿರಾರು ವ್ಯಕ್ತಿಗಳ ಬಗ್ಗೆ ಬರೆದಿದ್ದಾರೆ ನಿಜ. ಆದರೆ ಅವರು ಎಲ್ಲೂ ತಾವು ಆಯ್ದುಕೊಂಡ ವ್ಯಕ್ತಿಯ ಮಿತಿಗಳ ಬಗ್ಗೆ ನಿಷ್ಠುರವಾಗಿ ಒಂದು ಮಾತನ್ನೂ ಬರೆದಿಲ್ಲ, ವರ್ಣನಾತ್ಮಕ ಬಣ್ಣನೆ, ಗುಣವಾಚಕಗಳ ಆಡಂಬರದಲ್ಲೇ ಅವರ ಬರಹ ಸಾರ್ಥಕ್ಯ ಕಂಡು ಸುಮ್ಮನಾಗುತ್ತದೆ. ಹೀಗೆ ಅವರು ಬರೆದ ವ್ಯಕ್ತಿಚಿತ್ರಗಳ ಒಂದು ಬೃಹತ್ ಸಂಪುಟ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯಲ್ಲಿ ಕೆಲವರ್ಷಗಳ ಹಿಂದೆ ಹೊರಬಂದಿದೆ.

ಇನ್ನು ಹಾಮಾನಾ ವಿಷಯಕ್ಕೆ ಬಂದರೆ ಕಾಣುವುದು ಬೇಸರ ಹುಟ್ಟಿಸುವಷ್ಟಿರುವ ನೀರಸತೆ. ವ್ಯಕ್ತಿಯೊಬ್ಬರ ಬಗ್ಗೆ ಬರೆಯುವಾಗ ಅವರು ಹುಟ್ಟಿದ ದಿನ, ತಂದೆ-ತಾಯಿಯ ಹೆಸರು, ಸ್ಥಳ, ಬೆಳೆದಿದ್ದು ಓದಿದ್ದು ಸತ್ತಿದ್ದೆಲ್ಲ ಆಸಕ್ತಿಯ ವಿಚಾರವಲ್ಲ (ಪಿ. ಲಂಕೇಶ್ ಸತ್ತಾಗ ಬರೆದ ಬರಹದಲ್ಲಿ ಮಾತ್ರ ಹಾಮಾನಾ ಸ್ವಲ್ಪ ತೀಕ್ಷ್ಣವಾಗಿ ೮-೧೦ ಪ್ಯಾರಾಗಳನ್ನು ಬರೆದಿದ್ದಷ್ಟೇ ನೆನಪಿನಲ್ಲಿರುವುದು. ಇದರಲ್ಲಿ ಅವರು ಲಂಕೇಶ್ ವಿರುದ್ಧ ತಾವು ನಡೆಸಿದ ಖಟ್ಲೆ ಮತ್ತು ಅದರಲ್ಲಿ ತಮಗೆ ಸಿಕ್ಕ ಗೆಲುವಿನ ಬಗ್ಗೆ ಬರೆದಿದ್ದ ನೆನಪು). ಆದರೆ ತಮ್ಮ 'ಅಂಕಣ ಸಾಹಿತ್ಯ'ಕ್ಕೇ ಕೇಂದ್ರ ಸಾಹಿತ್ಯ ಆಕಾಡೆಮಿ ಪ್ರಶಸ್ತಿ ಪಡೆದುಕೊಂಡ ಖ್ಯಾತಿಯ ಹಾಮಾನಾ ಈ ಗುಟ್ಟನ್ನು ತಿಳಿದುಕೊಂಡಿರಲಿಲ್ಲ ಅನಿಸುತ್ತದೆ. ಅವರು ಕೊನೆಗಾಲದಲ್ಲಿ 'ಸುಧಾ' ವಾರಪತ್ರಿಕೆಗೆ ಬರೆಯುತ್ತಿದ್ದ ಅಂಕಣವಂತೂ ಇಂಥ 'ಜಾತಕ' ಕತೆಗಳ ಕಣಜವಾಗಿತ್ತು! ಅಚ್ಚರಿ ಎಂದರೆ ಕನ್ನಡ-ಸಂಸ್ಕೃತಿ ಇಲಾಖೆ ೧೯೮೭ರಲ್ಲಿ ಮೊದಲ ಬಾರಿಗೆ ಪ್ರಕಟಿಸಿದ ಡಿವಿಜಿ ಸಮಗ್ರ ಸಾಹಿತ್ಯದ ಸಂಪಾದಕ ಇದೇ ಹಾಮಾನಾ(ಈ ಕೆಲಸವನ್ನು ಅವರು ಅಚ್ಚುಕಟ್ಟಾಗಿ ಮಾಡಿದ್ದಾರೆ ಎನ್ನುವುದು ಬೇರೆ ಮಾತು).

ಇನ್ನು ಸ್ವತಃ ಸಮಾಜವಾದಿಯಾಗಿದ್ದ ಖಾದ್ರಿ ಬರೆದ ಆಯ್ದ ವ್ಯಕ್ತಿ ವಿಚಾರಗಳು 'ಅರ್ಪಣಾ' ಎಂಬ ಸಂಕಲನವಾಗಿ ಬಂದಿದೆ. ಅದರಲ್ಲಿ ಕರ್ಪೂರಿ ಠಾಕೂರ್, ಲೋಕನಾಯಕ ಜಯಪ್ರಕಾಶ್, ಲೋಹಿಯಾ, ಮುಲಯಂಸಿಂಗ್ ಯಾದವ್, ರಾಮಕೃಷ್ಣ ಹೆಗಡೆ, ಜಾರ್ಜ್ ಫರ್ನಾಂಡಿಸ್ ಬಗ್ಗೆ ಬರೆದಿರುವ ವ್ಯಕ್ತಿ ವಿಚಾರಗಳು ಅತ್ಯುತ್ತಮ. ಒಬ್ಬನ ಶಕ್ತಿ ಮತ್ತು ಮಿತಿಗಳನ್ನು ತೀಕ್ಷ್ಣವಾದ ಭಾಷೆಯಲ್ಲಿ ಹಿಡಿದಿಟ್ಟಿರುವ ಖಾದ್ರಿ ಅವರ ಬರಹದ ಬೆಡಗು ಅನ್ಯಾದೃಶ. ಒಳನೋಟಗಳಿಲ್ಲದ ಲೇಖಕನೇನಾದರೂ ಖಾದ್ರಿಯ ಭಾಷೆಯನ್ನು ಅನುಸರಿಸಿದರೆ ಅದು ಕೇವಲ ಶಬ್ದಾಡಂಬರದ ಡೌಲಿನಂತೆ ಕಾಣುತ್ತದೆ. ಈಗ ಬರೆಯುತ್ತಿರುವ 'ಸತ್ಯ'(ಕೆ. ಸತ್ಯನಾರಾಯಣ) ಕೂಡ ಆದಷ್ಟೂ ಕಡಿಮೆ ಪದಗಳಲ್ಲಿ ಒಬ್ಬರ ಏಳುಬೀಳು, ತಂತ್ರ ಕೌಶಲ, ಹಿಂದಿನ ಕನಸು, ಮುಂದಿನ ಗುರಿ, ಎದುರಿಸಿದ ಇಕ್ಕಟ್ಟು, ಸಿಲುಕಿಕೊಂಡಿದ್ದ ಬಿಕ್ಕಟ್ಟುಗಳನ್ನೆಲ್ಲ ಅನಾವರಣಗೊಳಿಸುತ್ತಾರೆ. ಆದರೆ ಖಾದ್ರಿ ಮತ್ತು ಸತ್ಯ ಅವರ ಮಿತಿಯೆಂದರೆ ಅವರ ಆಸಕ್ತಿಯೆಲ್ಲ ರಾಜಕಾರಣಗಳ ಮೇಲೇ ಕೇಂದ್ರೀಕೃತವಾಗಿದೆ. ಹಾಗೆ ನೋಡಿದರೆ 'ಸತ್ಯ' ಅವರು ಬರೆದ ಅತ್ಯುತ್ತಮ ವ್ಯಕ್ತಿ ವಿಚಾರವೆಂದರೆ, ಫುಟ್ಬಾಲ್ ಆಟಗಾರ ಬೈಚುಂಗ್ ಭೂತಿಯಾ ಕುರಿತದ್ದು! (ಇದನ್ನು ಅವರು ೧೯೯೯ರಲ್ಲಿ ಬರೆದಿದ್ದರೆಂದು ನೆನಪು). ಇದನ್ನು ಬಿಟ್ಟರೆ ಅವರು ಎಸ್. ನಿಜಲಿಂಗಪ್ಪ ಸತ್ತಾಗ ಬರೆದ ಒಂದು ಲೇಖನ (ಪ್ರಾಯಶಃ 'ಮಾಸದ ನಗು...' ಎಂಬ ಶೀರ್ಷಿಕೆಯಲ್ಲಿ) ಕೂಡ ಅತ್ಯುತ್ತಮ.

ಭೌಗೋಳಿಕವಾಗಿ ಅರ್ಧ ಶತಮಾನದಿಂದಲೂ ಕರ್ನಾಟಕದ ಹೊರಗಿರುವ ಶಾರದಾಪ್ರಸಾದರ ಈ ಪುಸ್ತಕವನ್ನು ಇವೆಲ್ಲವನ್ನೂ ಹಿನ್ನೆಲೆಗಿಟ್ಟುಕೊಂಡು/ನೆನಪಿಸಿಕೊಂಡು ನೋಡುವುದು ಒಳ್ಳೆಯದು. ಇನ್ನೊಂದು ನಿಟ್ಟಿನಿಂದ ಮೊದಮೊದಲು ಪತ್ರಕರ್ತರಾಗಿದ್ದ ಶಾರದಾಪ್ರಸಾದರು ನಂತರ ಮೂವರು ಪ್ರಧಾನಿಗಳಿಗೆ (ಇಂದಿರಾಗಾಂಧಿ, ಮೊರಾರ್ಜಿ ದೇಸಾಯಿ ಮತ್ತು ರಾಜೀವ್‌ಗಾಂಧಿ) ಪತ್ರಿಕಾ

ಸಲಹೆಗಾರರಾಗುವ ಮೂಲಕ ಅಧಿಕಾರದ ಗಂಗೋತ್ರಿಯಲ್ಲೇ ಇದ್ದವರು ಎಂಬ ಎಚ್ಚರವೂ ನಮಗೆ ಇಲ್ಲಿರಬೇಕು.

ಸಾಮಾನ್ಯವಾಗಿ ಅಧಿಕಾರದ ರುಚಿ ಕಂಡವರು, ಅದಕ್ಕೆ ಮರುಳಾದವರು ಸೂಕ್ಷ್ಮತೆ, ಸಂವೇದನಾಶೀಲತೆಗಳನ್ನೆಲ್ಲ – ಅದರಲ್ಲೂ ಲೇಖಕನಾಗಿ ಬೆಳೆಯಲು ಬೇಕಾದ – ಕಳೆದುಕೊಂಡು ಬಿಡುತ್ತಾರೆ. ಅಥವಾ ಅವರು 'ಧೈರ್ಯ ಮಾಡಿ' ಬರೆದಿದ್ದು 'ದೇವತಾ ಸ್ತುತಿ'ಯಂತಾಗಿ ಬಿಡುವ ಅಪಾಯವಿದೆ. ಇತ್ತೀಚೆಗೆ ಅಧಿಕಾರದಿಂದ ನಿರ್ಗಮಿಸಿದವರು ಯಾವುದೋ ದೊಡ್ಡ ಸತ್ಯ ಹೊರಹಾಕುತ್ತೇವೆಂಬ ಭ್ರಮೆಯಲ್ಲಿ ತಿಣುಕಾಡಿ ಏನೇನನ್ನೋ ಬರೆಯುತ್ತಾರೆ. ನಾಲ್ಕು ದಿನ ಸುದ್ದಿಯಾದ ನಂತರ ಇದೆಲ್ಲ ಲೊಳಲೊಟ್ಟೆ ಎಂಬುದು ಎಲ್ಲರಿಗೂ ಗೊತ್ತಾಗುತ್ತದೆ. ಬಿಜೆಪಿ ನಾಯಕ ಜಸ್ವಂತ್‌ಸಿಂಗ್ ಎಬ್ಬಿಸಿದ ಗದ್ದಲ ಇದಕ್ಕೆ ಇತ್ತೀಚಿನ ಸಾಕ್ಷಿ.

ಆದರೆ ಈ ಪುಸ್ತಕವನ್ನು ನೋಡಿದರೆ ಶಾರದಾಪ್ರಸಾದರು ಯಾವತ್ತೂ ಇಂಥ ವರ್ತುಲಕ್ಕೆ ಬಿದ್ದಿಲ್ಲ ಎನ್ನುವುದು ಮತ್ತು ಅವರು ಅಧಿಕಾರದ ಪ್ರಲೋಭನೆಗೆ ಒಳಗಾಗಿ ತಮ್ಮ ಅಂತಃಸ್ಸತ್ವ ಕಳೆದುಕೊಂಡಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಇಲ್ಲಿ ಕನ್ನಡದ ಅತ್ಯುತ್ತಮ ಮನಸ್ಸುಗಳು ಬೆಳೆದು ಬರುವ ವಿಸ್ಮಯವನ್ನು ನೋಡಬಹುದು. ಇಲ್ಲಿ ಒಂದು ಭಾಷಿಕ ಸಮುದಾಯದ ಪರಂಪರೆ ಕೂಡ ಕೆಲಸ ಮಾಡುತ್ತದೆ ಎನ್ನುವುದು ನಿಜ. ಅದಕ್ಕೇ ತಾನೆ ನಾವೆಲ್ಲ 'ಚತುರರ್ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್'.

ವ್ಯಾಪಕವಾದ ಅಧ್ಯಯನ, ಆಸಕ್ತಿ ರೂಢಿಸಿಕೊಂಡಿರುವ ಶಾರದಾಪ್ರಸಾದರು ಬರೆದಿರುವುದರಲ್ಲಿ ಕನ್ನಡದ ಮನಸ್ಸುಗಳಿಗೆ ಹತ್ತಿರವಾದ ಹೆಚ್ಚಿನ ವ್ಯಕ್ತಿಚಿತ್ರಣಗಳನ್ನೇ ಈ ಅನುವಾದಿತ ಕೃತಿಗೆ ಆಯ್ದುಕೊಂಡಿರುವುದು ಒಳ್ಳೆಯದು. ಅಂಕಣಕಾರನ ದಂಡಿಯಾದ ಬರಹದಲ್ಲಿ ನಮಗೆ ಬೇಕಾಗಿರುವುದು ಯಾವುದು ಎಂಬ ಲೆಕ್ಕಾಚಾರ ತುಂಬಾ ಮುಖ್ಯವಾಗುತ್ತದೆ (ಇವೆಲ್ಲ ಶಾರದಾಪ್ರಸಾದ್ 'ಏಷ್ಯನ್ ಏಜ್'ಗೆ ಬರೆದಿದ್ದು). ಇಲ್ಲಿರುವ ಶಿವರಾಂ ಕಾರಂತ, ಮಲ್ಲಿಕಾರ್ಜುನ ಮನ್ಸೂರ್, ನಿಜಲಿಂಗಪ್ಪ, ಎ.ಕೆ. ರಾಮಾನುಜನ್, ಕೆ.ಕೆ. ಹೆಬ್ಬಾರ್, ಆರ್.ಕೆ. ನಾರಾಯಣ, ಗುಲ್ಜಾರಿಲಾಲ್ ನಂದಾ ಮುಂತಾದವರೇ ಇದಕ್ಕೆ ಸಾಕ್ಷಿ. ಅಚ್ಚರಿ ಎಂದರೆ ಲೇಖಕರು ಇಲ್ಲಿ ವ್ಯಕ್ತಿಯ ಸಿದ್ಧಿ-ಸಾಧನೆಗಳ ಗುಣಗಾನದಲ್ಲೇ ಮೈಮರೆತಿಲ್ಲ. ಬದಲಿಗೆ ಆ ವ್ಯಕ್ತಿಯ ಕ್ಷೇತ್ರಗಳ ಬಗ್ಗೆ (ಉದಾಹರಣೆಗೆ ಮನ್ಸೂರರು ಬಂದಾಗ ಸಂಗೀತದ ಬಗ್ಗೆ) ತಮ್ಮ ಒಳ ನೋಟಗಳನ್ನು ನಿರ್ದಿಷ್ಟ ದನಿಯಲ್ಲಿ ದಾಖಲಿಸಿದ್ದಾರೆ. ಹಾಗೆಯೇ ಸಾಧಕನ ವ್ಯಕ್ತಿಗತ ಬದುಕಿನ ಸಿಹಿ-ಕಹಿ ಮುಖಗಳನ್ನು ಅಲ್ಲಲ್ಲಿ ತೆರೆದಿಟ್ಟಿದ್ದಾರೆ. ಹೀಗೆ ವ್ಯಕ್ತಿಯನ್ನು ಅಜರಾಮರಗೊಳಿಸುತ್ತಲೇ (ಕೇವಲ ಉತ್ಸವಮೂರ್ತಿಯನ್ನಾಗಿಸದೆ) ವಿಚಾರಧಾರೆಯನ್ನೂ ಹರಿಬಿಡುವುದೂ, ಅದಕ್ಕೆ ಸಂಬಂಧಿಸಿದಂತೆ ಕೆಲವು ಪ್ರಶ್ನೆಗಳನ್ನೆತ್ತುವುದೂ ಅಂಕಣ ಬರಹಕ್ಕಿರುವ ಮಿತಿಯನ್ನು ಮೀರುವ ಅತ್ಯುತ್ತಮ ವಿಧಾನ. ಹೀಗಾಗುವುದರಿಂದಷ್ಟೆ ಇಂಥ ಬರಹಗಳು ಗಮನಾರ್ಹವಾಗಬಲ್ಲವು. ಇಲ್ಲದಿದ್ದರೆ ಇವೆಲ್ಲ ಲಂಬಿಸಿ ಬರೆದ 'ನಿಧನ ವಾರ್ತೆ'ಗಳಾಗಬಲ್ಲವು ಅಷ್ಟೆ(ಸ್ವತಃ ಲೇಖಕರೇ ತಮ್ಮ ಬರಹಗಳ ಮಧ್ಯೆ ಪದೇಪದೇ ಪತ್ರಿಕೆಯಲ್ಲಿ ಬರುವ ನಿಧನ ವಾರ್ತೆಗಳ ವೈಖರಿಯನ್ನು ಟೀಕಿಸಿದ್ದಾರೆ). ಆದರೆ ಪತ್ರಿಕೋದ್ಯಮದ ದಿಕ್ಕುದೆಸೆಯ ಬಗ್ಗೆಯೂ ಖಾರವಾಗಿ ಮಾತಾಡುವ ಶಾರದಾಪ್ರಸಾದರು ಮಾಹಿತಿಯಲ್ಲಷ್ಟೇ ತೃಪ್ತರಾಗದ, ಸಾಂಸ್ಕೃತಿಕ ಕಾಳಜಿಗಳಿರುವ ಮಹತ್ವಾಕಾಂಕ್ಷಿ ಎಂಬುದಕ್ಕೆ ಅವರ ಬರಹಗಳು ದಕ್ಕಿಸಿಕೊಂಡಿರುವ ಆಳ-ಅಗಲಗಳೇ ಸಾಕ್ಷಿ. ಹಾಗೆ ನೋಡಿದರೆ ಶಾರದಾಪ್ರಸಾದರು ಇಂಗ್ಲಿಷಿನಲ್ಲೇ ಬರೆಯುತ್ತಿದ್ದರೂ ಕನ್ನಡದ ಪರಿಸರದಿಂದ ತಮಗೆ ಸಿಕ್ಕಿದ ಅಭಿಜಾತ ದೃಷ್ಟಿಯಿಂದಲೇ ಸಮಸ್ತ ವಿಶ್ವವನ್ನೂ ಕಾಣುತ್ತಿರುವವರು. ಇಲ್ಲದಿದ್ದರೆ

ಅವರೊಳಗಿನ ದಾರ್ಶನಿಕ – ಅದರಲ್ಲೂ ಅಧಿಕಾರ ಕೇಂದ್ರದಲ್ಲೇ ಇದ್ದುದರಿಂದ – ಯಾವತ್ತೋ ಕಣ್ಮುಚ್ಚಿರುತ್ತಿದ್ದ. (ಇದಕ್ಕೆ ಉದಾಹರಣೆಯಾಗಿ ಅವರು ಕೆಲ ತಿಂಗಳ ಹಿಂದೆ 'ಏಷ್ಯನ್ ಏಜ್'ನಲ್ಲಿ ಅರುಂಧತಿ ರಾಯ್ ಕುರಿತು ತೀಕ್ಷ್ಣವಾಗಿ ಬರೆದಿರುವ ಬರಹವನ್ನೂ ನೋಡಬಹುದು. ಸಣ್ಣಪುಟ್ಟ ಪ್ರತಿಭಟನೆಗಳ ಮುಂದೆ ನಿಂತು, ಟಿ.ವಿ.ಗಳಲ್ಲಿ ಮಿಂಚುತ್ತಿರುವ ಅರುಂಧತಿಯನ್ನು ಹೆಚ್ಚಿನ ಜನ ಆರಾಧಿಸುತ್ತಿರುವಾಗ ಇಂಥ ಬರಹಗಳು ಮುಖ್ಯವಾಗುತ್ತವೆ).

ಉದಾಹರಣೆಗೆ ನಿಜಲಿಂಗಪ್ಪನವರನ್ನು ಕುರಿತು ಬರೆಯುವಾಗ ಜಾಗೃತವಾಗಿರುವ ಅವರ ತರತಮ ಪ್ರಜ್ಞೆಯನ್ನು ನೋಡಿ:

> '... ಸಜ್ಜನರಾದ ನಿಜಲಿಂಗಪ್ಪ ಯಶಸ್ವಿ ಕಾಂಗ್ರೆಸ್ ಅಧ್ಯಕ್ಷರಾಗಲಿಲ್ಲ... ಅವರಿಗೆ ಒಂದು ರಾಜ್ಯದ ಮುತ್ಸದ್ದಿತನಕ್ಕೆ ಎಷ್ಟು ಬೇಕೋ ಅಷ್ಟು ಶಕ್ತಿ-ಪ್ರಭಾವಗಳಿದ್ದವು. ಸಿಂಡಿಕೇಟಿನಲ್ಲಿ ಸೇರಿಕೊಂಡು ರಾಜಕೀಯ ರಣರಂಗದಲ್ಲಿ ಅಸಾಧಾರಣ ಸಮರ ಕಲೆಯ ಪರಿಣತರಾಗಿದ್ದ ಇಂದಿರಾಗಾಂಧಿ ವಿರುದ್ಧ ಹೋರಾಡಬೇಕಾಗಿ ಬಂದುದು ದುರದೃಷ್ಟದ ಸಂಗತಿ. ತಮ್ಮ ಕುತಂತ್ರದ ಆಟ ಇಂದಿರಾಗೆ ಗೊತ್ತಾಗುವುದಿಲ್ಲ ಎಂದುಕೊಂಡಿದ್ದೇ ಸಿಂಡಿಕೇಟಿನವರು ಮಾಡಿದ ಬಹು ದೊಡ್ಡ ಪ್ರಮಾದ.'

ಶಾರದಾಪ್ರಸಾದರು ಸಾರ್ವಜನಿಕ ಮಹತ್ವದ ವಿಚಾರ ಕುರಿತು ಬರೆಯುವಾಗಲೂ ಯಾರನ್ನೂ ಓಲೈಸಿಲ್ಲ. ಇದಕ್ಕೆ ಉದಾಹರಣೆಯಾಗಿ ಅವರು 'ಶಿಕ್ಷಣ/ಸಂಸ್ಕೃತಿ ಖಾತೆ' ಹೇಗೆ 'ಎಚ್‌ಆರ್‌ಡಿ'ಗಿಂತ ಶ್ರೇಷ್ಠ ಎಚ್‌ಆರ್‌ಡಿ ಎಂಬ ಪರಿಕಲ್ಪನೆ ಹೇಗೆ ಮ್ಯಾನೇಜ್‌ಮೆಂಟ್ ವಲಯದ ಮತ್ತು ಮುಂದುವರಿದ ದೇಶಗಳ ಕುಯುಕ್ತಿಯ ಸೃಷ್ಟಿ ಎಂದು ವಿವರಿಸಿರುವುದನ್ನು ನೋಡಬಹುದು. ಅಕಾಡೆಮಿಗಳ ನೀತಿ-ನಿಯಮಾವಳಿಯಲ್ಲಿ ಆಗಬೇಕಾದ ಬದಲಾವಣೆ, ವಿಜ್ಞಾನಕ್ಕೆ ಸಿಗಬೇಕಾದ ಪ್ರೋತ್ಸಾಹ ಮುಂತಾದ ಲೇಖನಗಳಲ್ಲೂ ಇಂಥ ಒಳನೋಟಗಳನ್ನು ಕಾಣಬಹುದು.

ಈ ದೃಷ್ಟಿಯಿಂದ 'ತುರ್ತು ಪರಿಸ್ಥಿತಿ ಅನಿವಾರ್ಯವಾಗಿತ್ತೇ?' ಲೇಖನ ಇಲ್ಲಿ ಕುತೂಹಲ ಕೆರಳಿಸುತ್ತದೆ. ಏಕೆಂದರೆ ಇಂದಿರಾಗಾಂಧಿ ತುರ್ತು ಪರಿಸ್ಥಿತಿ ಘೋಷಿಸುವ ನಿರ್ಧಾರ ತೆಗೆದುಕೊಂಡಿದ್ದಕ್ಕೆ ಶಾರದಾಪ್ರಸಾದರು ಕೂಡ ಸಾಕ್ಷಿಯಾಗಿದ್ದಂಥವರು. ಜತೆಗೆ ತುರ್ತು ಪರಿಸ್ಥಿತಿ ವಿರೋಧಿಸಿ ನಡೆದ ಚಳವಳಿ ಕರ್ನಾಟಕದಲ್ಲಿ ಕೂಡ ವಿಶಾಲ ವಟವೃಕ್ಷದಂತೆ ಹಬ್ಬಿತ್ತು. ಆದರೆ ಈ ಚಿಕ್ಕ ಲೇಖನದಲ್ಲಿ ಲೇಖಕರು ಇಂದಿರಾಗಾಂಧಿ ಮಾಡಿದ ದುಸ್ಸಾಹಸದಿಂದ ಉಂಟಾದ ಆತ್ಯಂತಿಕ ಪರಿಣಾಮವನ್ನು (ಇನ್ಯಾರೂ ಭಾರತದಲ್ಲಿ ತುರ್ತು ಪರಿಸ್ಥಿತಿ ಘೋಷಿಸಲಾರರು) ಹೇಳುತ್ತಾರೆಯೇ ವಿನಾ ಖಚಿತವಾಗಿ ಏನನ್ನೂ ಹೇಳಿಲ್ಲ. ಮಧ್ಯೆ ಮಾತ್ರ, ಇಂದಿರಾ ಕೈಗೊಂಡ ನಿರ್ಧಾರದಿಂದ ತಮಗೆ ಥಂಡಿ ಹಿಡಿದ ಅನುಭವವಾಯಿತು ಎಂದು ಹೇಳಿದ್ದಾರೆ.

ಉಳಿದಂತೆ ಇಲ್ಲಿ ಪ್ರಭುಶಂಕರ, ಎಚ್.ಕೆ. ರಾಮಚಂದ್ರಮೂರ್ತಿ, ಬಾ.ವೇ. ಶ್ರೀಧರ ಅವರು ಮಾಡಿರುವ ಅನುವಾದವೂ ಚೆನ್ನಾಗಿದೆ. 'ಅನುವಾದವೆನ್ನುವುದು ಒಂದು ಪ್ರತ್ಯಭಿಜ್ಞಾನ' ಎನ್ನುವುದನ್ನು ನೆನಪಿಟ್ಟುಕೊಂಡರೆ ಇಲ್ಲಿನ ಲೇಖನಗಳು ಕನ್ನಡದಲ್ಲಿ ಪುನರ್ಸೃಷ್ಟಿಗೊಂಡಿವೆ. ಹೀಗಾಗಿ ಶಾರದಾಪ್ರಸಾದರ ಮುಂದಿನ ಪುಸ್ತಕದ ಬಗ್ಗೆ ನಿರೀಕ್ಷೆ ಇಟ್ಟುಕೊಳ್ಳಬಹುದು.

ಇದೇನೇ ಇರಲಿ, ಅಧಿಕಾರದ ವರ್ತುಲದಲ್ಲಿದ್ದರೂ ಶಾರದಾಪ್ರಸಾದರು ಅದರ ಕೆಟ್ಟ ವಾಸನೆಯನ್ನು ತಮ್ಮ ಅಂತರ್ಯಕ್ಕೆ ಬಿಟ್ಟುಕೊಂಡಿಲ್ಲ. ಏಕೆಂದರೆ ಒಂದು ಕಾಲದಲ್ಲಿ ಅತ್ಯುತ್ತಮ ಪತ್ರಕರ್ತರಾಗಿದ್ದ ಖಾದ್ರಿ ಶಾಮಣ್ಣನವರು ರಾಮಕೃಷ್ಣ ಹೆಗಡೆಯವರ ಜನತಾ ಪಕ್ಷಕ್ಕೆ ಹತ್ತಿರವಾದಷ್ಟೂ – ಅದರಲ್ಲೂ ವಿಧಾನ

ಪರಿಷತ್ ಸದಸ್ಯರಾಗಿ – ತಮ್ಮೊಳಗಿನ ಸೂಕ್ಷ್ಮತೆಯನ್ನೆಲ್ಲ ಬರಿದು ಮಾಡಿಕೊಂಡ ಉದಾಹರಣೆ ನಮ್ಮ ಮುಂದಿದೆ. ಹೀಗಾಗಿ ಬಿಟ್ಟರೆ ಲೇಖಕನಿಗೂ ರಾಜಕೀಯ ಪಕ್ಷದ ವಕ್ತಾರನಿಗೂ ಮಧ್ಯೆ ವ್ಯತ್ಯಾಸವೇ ಉಳಿಯುವುದಿಲ್ಲ. ದುರಂತವೆಂದರೆ ಖಾದ್ರಿ ಅಂಥ ಪ್ರಲೋಭನೆಯ ಬಲಿಪಶುವಾದರು; ಶಾರದಾಪ್ರಸಾದರು ಅಂಥ ವ್ಯಾವಹಾರಿಕ ಆಸೆಗಳನ್ನು ಕಡೆಗಣಿಸಿ, ಬೆಳೆದರು. ಖಾದ್ರಿಯಂಥ ರಾಜಕೀಯ ಮಹತ್ವಾಕಾಂಕ್ಷಿಗಳೂ ಶಾರದಾಪ್ರಸಾದರಂಥ ಸಾಂಸ್ಕೃತಿಕ ತಳಮಳಗಳುಳ್ಳವರೂ ಬೇರೆ ಬೇರೆ ನಿಲ್ಲುವುದು ಇಲ್ಲೇ.

ಕನ್ನಡದವರಾದ ಅಹೋಬಲ ಶಂಕರರ ನೆನಪಿನಲ್ಲಿ 'ಅಭಿನವ' ಆರಂಭಿಸಿರುವ ಪುಸ್ತಕ ಮಾಲೆಯ ಮೊದಲ ಕೃತಿಯಾದ 'ಎಲ್ಲ ಬಲ್ಲವರಿಲ್ಲ' ಒಂದು ಸೊಗಸಾದ ಕೃತಿ. ವ್ಯಕ್ತಿಗತ ಜಗಳಗಳ ಗುಗ್ಗುತನದಲ್ಲಿ ಸಾಹಿತ್ಯದ ಚೆಲುವು ಮಸುಕಾಗುತ್ತಿರುವ ಇವತ್ತಿನ ಸಂದರ್ಭದಲ್ಲಿ ಶಾರದಾಪ್ರಸಾದರ ಬರಹಗಳು ಅನುವಾದದ ಮೂಲಕವಾದರೂ ಕನ್ನಡ ಸಹೃದಯ ಸಮೂಹಕ್ಕೆ ಸಿಕ್ಕಿರುವುದು ಸಂತೋಷದ ಸಂಗತಿ. ಅಂದಹಾಗೆ ಶಾರದಾಪ್ರಸಾದರು ಪ್ರಸ್ತಾವನೆಯಲ್ಲಿ, ಕನ್ನಡದಲ್ಲಿ ಬರೆಯಬೇಕೆಂಬ ತಮ್ಮ ಆಸೆ ಈಡೇರದೆ ಇರುವ ಬಗ್ಗೆಯೂ ಅದಕ್ಕೆ ಕಾರಣವಾದ ಸಂಗತಿಯ ಬಗ್ಗೆಯೂ ನಿವೇದಿಸಿಕೊಂಡಿದ್ದಾರೆ. 'ಎಲ್ಲ ಬಲ್ಲವರಿಲ್ಲ' ಖಂಡಿತವಾಗಿಯೂ ಅವರ ಈ ಕೊರಗನ್ನು ನಿವಾರಿಸಿದೆ.

◆ ಬಿ.ಎಸ್.ಜಯಪ್ರಕಾಶ ನಾರಾಯಣ
ನಂ. ೯೧, ಔಟ್‌ಹೌಸ್, ೫ನೇ ಮುಖ್ಯರಸ್ತೆ, ಆರ್.ಎಂ.ಎಸ್. ಕಾಲೋನಿ,
ಪೋಸ್ಟ್ ಆಫೀಸ್ ರಸ್ತೆ, ಬೆಂಗಳೂರು – ೫೬೦ ೦೯೪






# ನಾನೋದಿದ್ದು

## ಕಾಲಜಿಂಕೆ

ಲೇಖಕ : ಕೆ.ಸತ್ಯನಾರಾಯಣ
ಬೆಲೆ : **ರೂ. 100/-** **ಪುಟ :** 180
ಪ್ರಕಾಶನ : ಪ್ರಿಯದರ್ಶಿನಿ ಪ್ರಕಾಶನ, ನಂ. 138, 7ನೇ ಸಿ ಮುಖ್ಯರಸ್ತೆ, ಆರ್‌ಪಿಸಿ ಲೇಔಟ್, ಹಂಪಿನಗರ, ವಿಜಯನಗರ 2ನೇ ಘಟ್ಟ, ಬೆಂಗಳೂರು -

**ಕಾ**ದಂಬರಿಯ ಓದು ಒಂದು ನಿಜವಾದ ತೀವ್ರವಾದ 'ಓದುವಿಕೆಯ' ಅನಭವವನ್ನು ನೀಡಬಲ್ಲುದು. ಅದರ ಕಥನ ಹಾಗೂ ನಿರೂಪಣೆ ದಿನಗಟ್ಟಲೆ, ವಾರಗಟ್ಟಲೆ ಅದರದ್ದೇ ಗುಂಗಿನಲ್ಲಿ ನಮ್ಮನ್ನು ಅದ್ದಿಬಿಡುತ್ತದೆ. ಇತ್ತೀಚಿನ ಹಲವು ವರ್ಷಗಳಲ್ಲಿ ಕಾದಂಬರಿ ಪ್ರಕಾರಕ್ಕಿದ್ದ ಪ್ರಾಮುಖ್ಯತೆ ಕುಸಿಯುತ್ತಿರುವ ಬಗ್ಗೆ ಆತಂಕ ಹುಟ್ಟುತ್ತದೆ. ಓದುವ ವರ್ಗವನ್ನು ದೃಶ್ಯಮಾಧ್ಯಮ ತನ್ನೆಡೆಗೆ ಸೆಳೆದುಕೊಂಡಿರುವುದು ಒಂದು ಕಾರಣವಾದರೆ ಓದುವಿಕೆಗೆ ಬೇಕಾದ ಬಿಡುವಿನ ಮನಸ್ಥಿತಿ ದಿನೇ ದಿನೇ ಕಡಿಮೆಯಾಗುತ್ತಿದೆ. ನಮ್ಮ ಅನೇಕ ಒಳ್ಳೆಯ ಓದುಗರ ಲೇಖಕರ ಸಾಹಿತ್ಯಲೋಕದ ಪ್ರವೇಶದ ಹೆದ್ದಾರಿ ಕಾದಂಬರಿಗಳೇ ಆಗಿದ್ದವೆನ್ನುವುದು ಕುತೂಹಲ ಹಾಗೂ ಅಧ್ಯಯನ ಯೋಗ್ಯ ವಿಷಯವೇ, ಇವತ್ತಿಗೂ ಒಂದು ತನ್ಮಯವಾದ ಓದುವಿಕೆಯ ಅನುಭವ ತೀವ್ರತೆ ದಕ್ಕುವುದು ಕಾದಂಬರಿಯ ಓದಿನಲ್ಲೇ. ಇದೇ ವಿಷಯದ ಹಿನ್ನೆಲೆಯಲ್ಲಿ ನಮ್ಮ ಬರಹಗಾರರ ತೊಡಗಿಸಿಕೊಳ್ಳುವಿಕೆಯೂ ಕಾದಂಬರಿಯ ಯಶಸ್ಸಿನಲ್ಲಿ ಪಾಲು ಪಡೆಯುತ್ತದೆ. ನಮ್ಮ ದಿನ-ವಾರ ಪತ್ರಿಕೆಗಳ ಅಗತ್ಯಕ್ಕೆ ತಕ್ಕ ಹಾಗೆ ರೂಪುಗೊಳ್ಳುವ ಸಣ್ಣಕತೆಗಳ ಸುಗ್ಗಿಯ ಕಾಲವಾದ ಇವತ್ತಿನ ಪತ್ರಿಕೆಗಳು ಬರಹಗಾರರಲ್ಲಿ ಕತೆ ಬರೆಯಲು ಹುಟ್ಟಿಸುತ್ತಿರುವ ಆತ್ಮವಿಶ್ವಾಸ ಕಾದಂಬರಿಗಳ ರಚನೆಗೆ ಮುಂದಾಗಲು ಪ್ರೇರೇಪಿಸುತ್ತಿಲ್ಲ. ದೊಡ್ಡದಾದ ಭಿತ್ತಿಯನ್ನು ಇಟ್ಟುಕೊಂಡು ಬರೆಯಬಲ್ಲ ತಾಳ್ಮೆ, ತಾಕತ್ತು ಎರಡೂ ನಮ್ಮ ಹೊಸ ಪೀಳಿಗೆಯ ಲೇಖಕರಲ್ಲಿ ಹೆಚ್ಚು ಗೋಚರಿಸುತ್ತಿಲ್ಲ. ಒಟ್ಟಿನಲ್ಲಿ ಕಾದಂಬರಿಗಳಿಗೆ ಇದು ಕಾಲವಲ್ಲ, ಮತ್ತೊಂದು ನೆಲೆಯಲ್ಲಿ ಈಗ ಹೊರಬರುತ್ತಿರುವ ಕಾದಂಬರಿಗಳಲ್ಲೇ ಜಾಗತೀಕರಣದ ಎದುರು ನಮ್ಮ ಲೇಖಕರು ಯಾವ ರೀತಿ ಪ್ರತಿಕ್ರಿಯೆ ತೋರುತ್ತಿದ್ದಾರೆ ಎನ್ನುವುದೂ ಮುಖ್ಯ ಪ್ರಶ್ನೆ, ವಸ್ತುವಿನ ಆಯ್ಕೆ, ನಿರೂಪಣೆಯ ಶೈಲಿ ಹಾಗೂ ಕಥನದ ವಿವರಗಳಲ್ಲಿ ನಮ್ಮ ಹೊಸ ಕಾಲದ ಸಂದಿಗ್ಧತೆ ಬಿಕ್ಕಟ್ಟು ಹಾಗೂ ಅದರ ಪ್ರಶ್ನೆಗಳನ್ನು ಲೇಖಕರು ಹೇಗೆ ನಿರ್ವಹಿಸಿದ್ದಾರೆ ಎನ್ನುವುದು ಗಮನಿಸಲೇಬೇಕಾದ ವಿಷಯ.

ಇತ್ತೀಚೆಗೆ ಪ್ರಕಟಗೊಂಡಿರುವ ಕೆ. ಸತ್ಯನಾರಾಯಣ ಅವರ 'ಕಾಲಜಿಂಕೆ' ಹಾಗೂ ಅಶೋಕ ಹೆಗಡೆ ಅವರ 'ಅಶ್ವಮೇಧ' ಕಾದಂಬರಿಯನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕೆಂದು ತೋರುತ್ತದೆ.

ಸತ್ಯನಾರಾಯಣ ನುರಿತ ಬರಹಗಾರ. ಈಗಾಗಲೇ ನಾಲ್ಕು ಕಾದಂಬರಿ, ಮೂರು ಸಣ್ಣಕತೆಗಳ ಸಂಕಲನ, ಎರಡೆರಡು ಲಲಿತ ಪ್ರಬಂಧ ಹಾಗೂ ವಿಮರ್ಶೆಗಳ ಸಂಕಲನಗಳನ್ನು ಈತನಕ ಪ್ರಕಟಿಸಿದ್ದಾರೆ.

'ಕಾಲಜಿಂಕೆ'ಯ ವಸ್ತು ಕೆ. ಸತ್ಯನಾರಾಯಣರ ಯಾವತ್ತಿನ ಅತ್ಯಂತ ಪ್ರಿಯವಾದ ಮಧ್ಯಮವರ್ಗದ ಕುಟುಂಬ. ವಿದ್ಯಾವಂತ ಮಧ್ಯಮವರ್ಗವೊಂದರ ಕುಟುಂಬದ ಸದಸ್ಯರ ಮಾನಸಿಕ ತೊಳಲಾಟಗಳು, ಹೊಸ ಕಾಲದ ತಲ್ಲಣಗಳು ನೈತಿಕ ಪ್ರಶ್ನೆಗಳು, ತಮ್ಮ ಕೌಟುಂಬಿಕ ಹಿನ್ನೆಲೆ ಹಾಗೂ ಜೀವನಶೈಲಿಗಳ ಬಗೆಗೆ ಏಳುವ ಪ್ರಶ್ನೆಗಳು ಹೀಗೆ ಅನೇಕ ವಿಷಯ ವಿಸ್ತಾರಗಳ ವೇಣಿಗಳು ಸೂಕ್ಷ್ಮವಾಗಿ ನೇಯಲ್ಪಟ್ಟಿದೆ.

ಇಲ್ಲಿನ ಕಥಾನಾಯಕ ರಂಗನಾಥ ಅವನ ಮಗಳು ಪ್ರಾರ್ಥನಾ ಇವರುಗಳು ತಂತಮ್ಮ ಬದುಕಿನ ಅರ್ಥಶೋಧಕ್ಕಾಗಿ ನಡೆಸುವ ಹೋರಾಟದ ನಿರೂಪಣೆ ಈ ಕಥೆಯ ಪಾತ್ರಗಳಲ್ಲಿದೆ.

ಕಾಲವೆನ್ನುವುದು ಒಂದು ಜಿಂಕೆಯ ಹಾಗೆ ಅದು ಮರಳುಗಾಡಿನ ಬಿಸಿಲಲ್ಲಿ ಇದ್ದರೂ ಇಲ್ಲದಿದ್ದರೂ ಇದ್ದ ಹಾಗೆ ಕಾಣಿಸುವುದು ಅದು ನಿಜಕ್ಕೂ ಇದೆಯೋ, ಇತ್ತೇ ಎಂಬ ಭ್ರಮೆ ಹುಟ್ಟಿಸುವುದು. ಇಂಥಾ ಒಂದು ಪ್ರಸಂಗ ಈ ಕಾದಂಬರಿಯ ನಾಯಕನಿಗೆ ಒದಗಿಬರುತ್ತದೆ. ಅದು ಪ್ರತಿಕಾಲದ ಪ್ರಶ್ನೆಯೂ ಹೌದು. ಭವಿಷ್ಯತ್ತಿನ ಅನಿಶ್ಚಿತತೆಯ ಹಿನ್ನೆಲೆಯ ಒಳಗೇ ವರ್ತಮಾನದ ನಮ್ಮ ನಿರಾಕರಿಸುವ ನೆಲೆಯ ವ್ಯಾಖ್ಯಾನಗಳು ಹಾಗೂ ಸಂದಿಗ್ಧಗಳನ್ನು ನಿರೂಪಿಸಿಕೊಳ್ಳುವ ಪ್ರಯತ್ನ ನಡೆಯುತ್ತಿರುತ್ತದೆ.

ಇದರ ಬೆನ್ನುಡಿಯಲ್ಲಿ ಯು.ಆರ್. ಅನಂತಮೂರ್ತಿ ಅಭಿಪ್ರಾಯ ಪಡುವಂತೆ 'ಕಥೆ ಕೊನೆಯಾದರೂ ನಾವು ಕಥೆಯಿಂದ ಹೊರಬರದಂತೆ, ಕಥೆ ತನ್ನ ಒಳಗೇ ನಮ್ಮನ್ನು ಉಳಿಸಿಕೊಳ್ಳುತ್ತದೆ. ಪ್ರಶ್ನೆಗಳನ್ನು ಕೇಳಿಕೊಳ್ಳುತ್ತೇನೆ' ಎನ್ನುತ್ತಾರೆ. ''ಕಥೆಗಾರನ ಬರವಣಿಗೆಯಲ್ಲಿ ಸಮಸ್ಯೆಗಳನ್ನು ಮಂಡಿಸುವ ವಿನಯಶೀಲತೆಯಿಂದಾಗಿ ಓದುಗ ಈ ಅವಕಾಶವನ್ನು ಪಡೆದುಕೊಳ್ಳುತ್ತಾನೆ'' ಅನ್ನುತ್ತಾರೆ. ಇದೇ ಅಭಿಪ್ರಾಯವನ್ನು ಮತ್ತೊಂದು ನೆಲೆಯಿಂದ ಗಮನಿಸುವುದಾದರೆ ವಿಸ್ತಾರವಾಗಬಹುದಾಗಿದ್ದ ಕಾದಂಬರಿ ಕ್ಯಾಪ್ಸೂಲ್ ಆಗಿಬಿಟ್ಟಿರುವುದು ಗೋಚರಿಸುತ್ತದೆ. ನಿರೂಪಕನ ಇನ್ನಿಲ್ಲದ ಅವಸರದ ಓದುಗನ ಓದುವಿಕೆಯ ಅನುಭವವನ್ನು ಮಿತಗೊಳಿಸುತ್ತದೆ. ನಮ್ಮ ಓದುಗರ ಓದುವಿಕೆಯಲ್ಲಿ ಕಡಿಮೆಗೊಳ್ಳುತ್ತಿರುವ ಸಾವಧಾನ ನಮ್ಮ ಲೇಖಕರ ನಿರೂಪಣೆಯಲ್ಲಿ ಇಣುಕಿಬಿಟ್ಟರೆ ತೀವ್ರವಾದ 'ಓದುಬಾಕರಿ'ಗೆ ನಿರಾಸೆಯಾಗುತ್ತದೆ.

ಕೇವಲ ಎರಡು- ಮೂರು ತಿಂಗಳ ಕಾಲಾವಧಿಯಲ್ಲಿ ಘಟಿಸುವ ಕಥನದ ಇಂಥ ಕೆಲವು ಮಿತಿಗಳನ್ನು ಈ ಕಾದಂಬರಿಯ ವಸ್ತುವಿನ ಸಾಧ್ಯತೆಯನ್ನು ಮಿತಗೊಳಿಸಿತೆನ್ನುವುದು ಕಾದಂಬರಿಯಲ್ಲಿ ಚರ್ಚಿಸಿರುವ ಪ್ರಶ್ನೆಗಳನ್ನು ಮತ್ತೆ ಮತ್ತೆ ಕೇಳಿಕೊಳ್ಳುತ್ತಲೇ ಉತ್ತರಿಸಿಕೊಳ್ಳುತ್ತಲೇ ಪ್ರತಿ ಕಾಲ ತನ್ನ ಕಾಲದ ಜಿಂಕೆಯನ್ನು ಕಂಡುಕೊಳ್ಳುತ್ತಿರಬೇಕಾಗುತ್ತದೆ.






ಅಶೋಕ ಹೆಗಡೆ ಅವರ ಮೊದಲ ಕಾದಂಬರಿ 'ಅಶ್ವಮೇಧ' ಇದನ್ನು ಅತ್ಯಂತ ಮನಸ್ಸುಳ್ಳ ನಿರೂಪಣೆ ಅಂತ ಒಂದೇ ಸಾಲಿನಲ್ಲಿ ಕರೆದುಬಿಡಬಹುದು. ಸತ್ಯನಾರಾಯಣರ ಕಾದಂಬರಿ ಕೌಟುಂಬಿಕ ನೆಲೆಯ ಸ್ಥಿತ್ಯಂತರಗಳನ್ನು ನಿರೂಪಿಸಿದರೆ 'ಅಶ್ವಮೇಧ' ವಲ್ಲಿಗದ್ದೆ ಎನ್ನುವ ಉತ್ತರ ಕರ್ನಾಟಕದ ಹಳ್ಳಿಯೊಂದರ ಒಳಹರಿವಿನಲ್ಲಿ ಅದರ ಒಳ ಸುಳಿಗಳಲ್ಲಿ ನಡೆಯುವ ಸಾಮಾಜಿಕ ಹಾಗೂ ವ್ಯಕ್ತಿಗತ ಘರ್ಷಣೆಗಳ ಚಿತ್ರಣ ಇದರಲ್ಲಿದೆ. ಆಮೂರರು ಅಭಿಪ್ರಾಯಪಡುವಂತೆ — ನಮ್ಮ ಹಿರಿಯ ಲೇಖಕರು ಚಿತ್ರಿಸಿರುವ ತಂತಮ್ಮ ಊರು ಪರಿಸರಗಳನ್ನು ಈಗಾಗಲೇ ಓದಿರುವ ಮನಸ್ಸುಗಳಿಗೆ ಕನ್ನಡದ ದೇಸಾಯಿ ಹಾಗೂ ಅನಂತಮೂರ್ತಿ

ಯವರ ಕಾದಂಬರಿ ನೆನಪಾಗುವುದು ಸಹಜವೇ. ಆದರೆ ಇಂಥ ನೆನಪುಗಳ ಹ್ಯಾಂಗೋವರ್‌ಗಳಿಲ್ಲದೆಯೂ ಈ ಕಾದಂಬರಿಯನ್ನು ಒಂದು ಅಪ್ಪಟವಾದ ಕಾದಂಬರಿಯ ಹಾಗೆ ಓದಬಹುದಾದ್ದು. ಈ ಹಿಂದಿನ ಕಥಾ ಸಂಕಲನಗಳ ಕಥೆಗಳಲ್ಲಿದ್ದ ನಿರೂಪಣೆಯ ತೊಡಕುಗಳನ್ನು ಈ ಕಾದಂಬರಿಯಲ್ಲಿ ಅಶೋಕ ಮೀರಿದ್ದಾರೆ. ಸೃಜನಶೀಲತೆಯ ದುಂದುಗಾರಿಕೆ ಈ ಕಾದಂಬರಿಯ ನಿರೂಪಣೆಯಲ್ಲಿಲ್ಲ. ಆದರೆ ಕಥಾವಸ್ತುವಿನಲ್ಲಿ ಕಾದಂಬರಿಯ ಒಳಗಿನ ಕೆಲವು ಸಂಗತಿಗಳು ಅಸ್ಪಷ್ಟವಾಗಿ ನಿರೂಪಿತವಾಗಿದೆ. ಯಾರೂ ನಾಯಕರಲ್ಲದಿದ್ದರೂ ಈ ಕಾದಂಬರಿಯ ನಾಯಕ ಪಾತ್ರದ ಹಾಗೆ ಮೊದಮೊದಲಿಗೆ ಗೋಚರಿಸುವ ರಾಜೀವ ಗಾಯ್‌ತೊಂಡೆ ಆ ಊರಿಗೆ ಯಾಕೆ ಬಂದ ಅನ್ನುವುದರ ನಿರೂಪಣೆಯಲ್ಲಾಗಲೀ, ತನ್ನೂರ ಹುಡುಗನನ್ನು ಪ್ರೀತಿಸಿ ಓಡಿ ಹೋಗಿ ಲೈಂಗಿಕವಾಗಿ ನಿರಾಶಳಾಗಿ ವಾಪಸ್ಸು ಬರುವ ನಿರ್ಮಲೆ ಬೆಳ್ಳಿಯಾದದ್ದು ಯಾಕೆ ಎನ್ನುವ ಪ್ರಶ್ನೆ ಎದುರಿಸುವಲ್ಲಿ ಹೀಗೆ ಅನೇಕ ಅಸ್ಪಷ್ಟ ಚಿತ್ರಣಗಳು ಇದರಲ್ಲಿದ್ದರೂ ಓದುವಿಕೆಗೆ ಇವು ತೊಡಕಾಗುವುದಿಲ್ಲ. ನಿರೂಪಕನಲ್ಲಿರುವ ಹೆಣ್ಣು ಮನಸ್ಸು ಮೊದಲರ್ಧದ ಕಾದಂಬರಿಯನ್ನು ಆರ್ದ್ರಗೊಳಿಸಿದೆ. ಉಳಿದರ್ಧ ಸಾಮಾಜಿಕ ಘರ್ಷಣೆಯ ನಿರೂಪಣೆಯಲ್ಲಿ ನಿಷ್ಠುರವಾಗುತ್ತದೆ.

ನನ್ನ ತೀವ್ರವಾದ ಆಸಕ್ತಿ ಇರುವಂಥದ್ದು ಅಶೋಕ ಹೆಗಡೆಯವರಂಥ ನಿರೂಪಣೆಯ ಹಿಡಿತ ಸಾಧಿಸಿರುವ ಹೊಸ ಪೀಳಿಗೆಯ ಲೇಖಕರು. ಇವತ್ತಿನ 'ವಾಸ್ತವ'ಗಳನ್ನು ಹೇಗೆ ಎದುರಿಸಿ ನಿರೂಪಿಸುತ್ತಾರೆ ಅನ್ನುವುದು, ಇತ್ತೀಚೆಗೆ ಪ್ರಕಟಿಸಿದ 'ಕತ್ತಲು' ಅನ್ನುವ ಕಥೆ ಅಶೋಕ ಅವರ ಮುಂದಿನ ಕಥನದ ದಿಕ್ಕುಗಳ ಬಗ್ಗೆ ಆಸೆತೆರೆದಿಟ್ಟಿದೆ. ನಮ್ಮ ಕಾರ್ಪೊರೇಟ್ ಜಗತ್ತು ಅದರ ಭಾಗವಾದ ನಗರ ಜೀವನದ ಸಂದಿಗ್ಧ ಪುಳಕಗಳು ಹತಾಶೆಗಳು ಎಲ್ಲವನ್ನೂ ಕಟ್ಟಿಕೊಡುವ ನಿರೂಪಣೆ ಅಗತ್ಯವಾಗಿ ಬೇಕಾಗಿದೆ. ಹಾಗೆ ನೋಡಿದರೆ 'ನಗರ' ಬದುಕಿನ ನಿರೂಪಣೆಗೆ ಕನ್ನಡದ ಲೇಖಕರ ಮಟ್ಟಿಗೆ ಅಷ್ಟು ಒತ್ತಾಸೆ ಇರುವ ಹಾಗೆ ಕಾಣಬರುವುದಿಲ್ಲ. ಹಿಂದಕ್ಕೆ (ಬಾಲ್ಯ, ಊರು ಇತ್ಯಾದಿ) ಹೋಗುವ ಅಥವಾ ನುಗ್ಗಿ ನಡೆ ಮುಂದೆ ಅಂತ ಘೋಷಿಸುವ ಎರಡೂ ಅತಿಗಳಿಗೆ ಬಲಿಯಾಗದೆ ಇವತ್ತಿನ ತಣ್ಣಗಿನ ನಿರೂಪಣೆ ಅಗತ್ಯವಾಗಿ ಬೇಕು ಅನ್ನಿಸುತ್ತದೆ. ಕಥೆಯ ವಸ್ತುವಿನ ದೃಷ್ಟಿಯಿಂದ ಈ ಕಥಿತ ಜಗತ್ತು ಇಪ್ಪತ್ತು ವರ್ಷ ಹಿಂದಕ್ಕೆ ಚಲಿಸಿದರೂ ನಿರೂಪಣೆ ಒಂದು ನಿರ್ದಿಷ್ಟ ಪಾಕದಲ್ಲಿದ್ದು ಇದರ ಬೇರೆಬೇರೆ ಅಚ್ಚುಗಳನ್ನು ಕಾತರಿ ನೋಡುವಂತಾಗಿದೆ.

ಮೊದಲಿಗೆ ಚರ್ಚಿಸಿದ ಓದುವ ಗುಂಗಾಗಿ ಕಾಡುವ ತೀವ್ರತೆಯನ್ನು ಈ ಎರಡೂ ಕಾದಂಬರಿಗಳು ಕೆಲಮಟ್ಟಿಗೆ ಹೊಂದಿವೆ.



**ಅಶ್ವಮೇಧ**
ಲೇಖಕ :
ಅಶೋಕ ಹೆಗಡೆ
ಬೆಲೆ :
**ರೂ. 120/-**
**ಪುಟ :** 208
ಪ್ರಕಾಶನ :
ಅಕ್ಷರ ಪ್ರಕಾಶನ
ಹೆಗ್ಗೋಡು, ಸಾಗರ,
ಕರ್ನಾಟಕ – 577 417




ಅನಕೃ ಕನ್ನಡದ ಕಾದಂಬರಿಲೋಕದ ಬಹುದೊಡ್ಡ ಹೆಸರು. ಹೆಸರಾಂತ ವಿಮರ್ಶಕ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು 'ಅನಕೃ ಮತ್ತು ಕನ್ನಡ ಸಂಸ್ಕೃತಿ' ಬರೆದಿದ್ದಾರೆ. ಅರಿಕೆಯಲ್ಲಿ ಲೇಖಕರು ಹೇಳುವಂತೆ 'ಸಮಗ್ರ ಓದು' ಅವರ ಈಗಿನ ಪ್ರಮುಖ ಆಸಕ್ತಿ ಅನಕೃ ಅವರ ಬಗ್ಗೆ ಹಾಗೊಂದು ಸಮಗ್ರ ಓದಿನ ಜೊತೆಗೆ ಸೂಕ್ಷ್ಮವಾದ ಗಟ್ಟಿ ಚರ್ಚೆಯನ್ನು ಈ ಕೃತಿ ಸಾಧಿಸಬೇಕಾಗಿತ್ತು. ಈ ಪುಟ್ಟ ಪುಸ್ತಕ ಬಹಳ ಅಚ್ಚುಕಟ್ಟಾಗಿ ಗಮನ ಸೆಳೆಯುವಂತೆ ಮುದ್ರಿತವಾಗಿದ್ದರೂ ಇದರ ಓದುವಿಕೆ ಒಂದು ಸುಂದರ ಭಾಷಣದ ಹಾಗೆ ತೋರಿಬರುತ್ತದೆ. ಭಾಷಣ ಮುಗಿದ ಮೇಲೆ ಯಾವುದೂ ನೆನಪಿನಲ್ಲಿ ಉಳಿಯದ ಹಾಗೆ. ಅನಕೃ ಅವರ ಆತ್ಮಕಥೆ 'ಬರಹಗಾರನ ಬದುಕು' ಪುಸ್ತಕದ ಸಂಕ್ಷಿಪ್ತ ಸರಳ ರೂಪವಾಗಿರುವ ಈ ಪುಸ್ತಕದಲ್ಲಿ ಹೆಜ್ಜೆಗೊಂದೊಂದು ಕೊಟೇಶನ್ ಸಿಗುತ್ತದೆ.

ಎಷ್ಟೋ ಸಲ ಲೇಖಕರ ಅಭಿಪ್ರಾಯ ಯಾವುದು ಅವರು ಹೇಳುತ್ತಿರುವುದು ಯಾರ ಮಾತು ಎನ್ನುವುದರ ಗೆರೆ ಅಳಿಸಿ ಹೋಗುತ್ತದೆ. ಎಲ್ಲೂ ಅನಕೃ ಅವರ ಬಗ್ಗೆ ಕನ್ನಡ ಸಂಸ್ಕೃತಿಯಲ್ಲಿ ಅವರ ಪಾತ್ರದ ಬಗ್ಗೆ ಗಟ್ಟಿ ದನಿಯಲ್ಲಿ, ಖಚಿತವಾಗಿ ಲೇಖಕರು ಏನನ್ನೂ ಹೇಳುವುದಿಲ್ಲ, ಅಡ್ಡಗೋಡೆಯ ಮೇಲೆ ದೀಪವಿಟ್ಟ ಹಾಗೆ ಇಲ್ಲಿನ ಧ್ವನಿ ಇದೆ. ಇಡೀ ಪುಸ್ತಕ ನರಹಳ್ಳಿ ಅವರ ಅಧ್ಯಯನದ ಕೊರತೆಯನ್ನು ಎತ್ತಿ ತೋರಿಸುತ್ತದೆ. ಒಂದು ದೊಡ್ಡ ಲೇಖನವಾಗಬಹುದಾದಷ್ಟು ವಿಷಯಗಳನ್ನು ಎಳೆದು ಪುಸ್ತಕ ರೂಪದಲ್ಲಿ ಇರಿಸಿರುವ ಹಾಗೆ ತೋರುತ್ತದೆ. ಅಲ್ಲಲ್ಲಿ ಚರ್ಚೆಗೆ ಮುಂದಾಗುತ್ತಾರೆ ಅಂತ ಅನ್ನಿಸಿದರೂ ಯಾವುದೋ ಕಾಲದ ಕೆಲವರ ಅಭಿಪ್ರಾಯಗಳನ್ನು ಹೆಚ್ಚು ಆಳಕ್ಕೆ ಹೋಗದೆ ಮೇಲು ಮೇಲೆ ನಿರೂಪಿಸಿದ್ದಾರೆ. ನಮ್ಮ ಅಕೆಡೆಮಿಕ್ ಲೇಖಕರ ಪುಸ್ತಕಗಳ ಪಟ್ಟಿಯ ಹೆಚ್ಚಳಕ್ಕೆ ಇಂಥ ಪ್ರಯೋಗಗಳು ಸಹಕಾರಿಯಾಗುತ್ತವೆ. ದೊಡ್ಡ ದೊಡ್ಡ ಪತ್ರಿಕೆಗಳು ಇಂಥ ಪುಸ್ತಕಗಳನ್ನು ಬೆನ್ನು ತಟ್ಟಿ ಬರೆಯುವಾಗ ನಮ್ಮ ಸಂವೇದನೆಗಳ ಬಗ್ಗೆಯೇ ಅನುಮಾನಗಳು ಏಳಲು ಶುರುವಾಗುತ್ತದೆ. ಒಳ್ಳೆಯ ವಿಮರ್ಶಕರು, ಅಧ್ಯಾಪಕರು ಕೆಟ್ಟ ಪುಸ್ತಕ ಬರೆದಾಗ ಅದರ ಬಗ್ಗೆ ಯಾವ ಮುಲಾಜೂ ಇಲ್ಲದೆ ಹೇಳಲೇಬೇಕಾಗುತ್ತದೆ.

◆ **ಡಿ.ವಿ. ಪ್ರಹ್ಲಾದ್**

## ಅನಕೃ ಕನ್ನಡ ಮತ್ತು ಸಂಸ್ಕೃತಿ

ಲೇಖಕ :
**ನರಹಳ್ಳಿ ಬಾಲಸುಬ್ರಹ್ಮಣ್ಯ**
ಬೆಲೆ :
**ರೂ. 95/-**
**ಪುಟ : 120**
ಪ್ರಕಾಶನ :
**ಅಂಕಿತ ಪ್ರಕಾಶನ**
ಶ್ಯಾಂಸಿಂಗ ಕಾಂಪ್ಲೆಕ್ಸ್,
ಗಾಂಧಿ ಬಜಾರ್ ಮುಖ್ಯರಸ್ತೆ,
ಬೆಂಗಳೂರು



# ಪ್ರತಿಕ್ರಿಯೆ



ಸಂಚಯ ಕೈಗೆ ತಲುಪಿದಾಗಲೆಲ್ಲ, ಯಾವುದಾದರೂ ಲೇಖನ ಇಷ್ಟವಾದಾಗಲೆಲ್ಲ 'ಪತ್ರ ಬರೆಯಬೇಕು' ಎಂಬ ಭಾವ ಹುಟ್ಟಿ ಅದು ಸದಿಚ್ಛೆಯಾಗಿಯೇ ಉಳಿದು ಹೋದ ಸಂದರ್ಭಗಳು ಅನೇಕ ಇವೆ. ನಿಮ್ಮದೇ ರೂಪಕವನ್ನು ತೆಗೆದುಕೊಂಡು ಹೇಳುವುದಾದರೆ ನಮ್ಮ ಸದಿಚ್ಛೆಗಳು ಕಾರ್ಯರೂಪಕ್ಕೆ ಬರುವುದು 'ನಾಳೆಯಿಂದ...' ಆದರೆ ಈ ಸಲ ರಾಜ್‌ಕುಮಾರ್‌ರನ್ನು ಕುರಿತು ಸಂಚಯವನ್ನು ಓದಿದಾಗ ನನಗೆ ಸುಮ್ಮನಿರಲಾಗಲಿಲ್ಲ.

ರಾಜ್‌ಕುಮಾರ್‌ರನ್ನು ಕುರಿತು ಈ ಸಲದ ಸಂಚಯವು ಸಂಚಯಿಸಿರುವ ಹದಿನಾರು ಲೇಖನಗಳು ತಮ್ಮ ವಿಷಯವ್ಯಾಪ್ತಿ ಮತ್ತು ಪರಿಪ್ರೇಕ್ಷ್ಯದ ವೈವಿಧ್ಯದಿಂದಾಗಿ ಗಮನ ಸೆಳೆಯುತ್ತಿವೆ. ಈ ಲೇಖನಗಳಲ್ಲಿ ಮುಗ್ಧ ಆರಾಧನೆಯಿಂದ ಹಿಡಿದು ನಿಷ್ಠುರ ವಿಮರ್ಶೆಯ ತನಕ, ನೆನಪಿನ ದಾಖಲೆಯಿಂದ ಹಿಡಿದು ಸಂಸ್ಕೃತಿ ಚಿಂತನೆಯ ತನಕ ವಿಭಿನ್ನ ನೆಲೆಗಳು ಸಿಗುತ್ತವೆ. ಒಂದು ರೀತಿಯಲ್ಲಿ ಇದು ರಾಜ್‌ಕುಮಾರ್‌ರನ್ನು ಧ್ಯಾನಿಸುವ ಬುದ್ಧಿ-ಭಾವಗಳ ವಿದ್ಯುದಾಲಿಂಗನ. ಲಲಿತಾ ಸಿದ್ಧಬಸವಯ್ಯನವರು ಹೇಳುವಂತೆ ನಮ್ಮ ಭಾವಕೋಶಗಳಲ್ಲಿರುವ ರಾಜ್‌ಕುಮಾರ್ 'ಎಲ್ಲಿ ಸತ್ತಿದ್ದಾರೆ?' ಯಾವತ್ತೂ ರಾಜ್‌ಕುಮಾರ್‌ರನ್ನು ವೈಯಕ್ತಿಕವಾಗಿ ಭೇಟಿಯಾಗದ ನನ್ನಂಥವಳಿಗೆ ಅವರ ಸಿನಿಮಾಗಳು ಬೆಳ್ಳಿತೆರೆಯಲ್ಲಿ ಟೀವಿಯಲ್ಲಿ ಬರುತ್ತಿರುವವರೆಗೆ ರಾಜ್‌ಕುಮಾರ್ ಬದುಕಿಯೇ ಇರುತ್ತಾರೆ. ಕಲಾವಿದರು ಅಮರರಾಗುವುದೆಂದರೆ ಇದೇ ಏನು?

ನನಗೆ ವೈಯಕ್ತಿಕವಾಗಿ ಇಷ್ಟವಾದ ಲೇಖನಗಳೆಂದರೆ ವಸುಧೇಂದ್ರ, ಸಿ. ಸೀತಾರಾಂ, ಸುಗತ ಶ್ರೀನಿವಾಸ ರಾಜು ಮತ್ತು ರಹಮತ್ ತರೀಕೆರೆಯವರ ಲೇಖನಗಳು. ರಾಜ್‌ಕುಮಾರ್ ಅವರ ಬಗೆಗಿನ ನಿಷ್ಠುರ ವಿಮರ್ಶೆ ಅರ್ಥಾತ್ ಅವುಗಳ ವ್ಯವಸ್ಥಿತ ಸಂಕಲನ ಸಾಧ್ಯವಾಗುತ್ತಿರುವುದು ಅವರ ಸಾವಿನ ನಂತರ ಅನ್ನುವುದು ಎಂತಹ ದುರಂತದ ವಿಷಯವಲ್ಲವೇ? ಸದ್ಯ ಈಗಲಾದರೂ ಸಾಧ್ಯವಾಗುತ್ತಿದೆಯಲ್ಲ, ಅದೇ ಸಮಾಧಾನ!

ಇಂತಹ ಸಂಚಿಕೆಯನ್ನು ರೂಪಿಸಿರುವುದಕ್ಕೆ ನಿಮಗೆ ಅಭಿನಂದನೆಗಳು. ಈಗಾಗಲೇ ಇದರ ಕೆಲವು ಲೇಖನಗಳನ್ನು ೧೨ ವರ್ಷದ ನನ್ನ ಹಿರಿಮಗಳಿಗೆ ಓದಿ ಹೇಳಿದ್ದೇನೆ ಮತ್ತು ಈ ಸಂಚಿಕೆಯನ್ನು ನನ್ನ ಎರಡು ವರ್ಷದ ಕಿರಿಯ ಮಗಳಿಗಾಗಿ ಎತ್ತಿಡುತ್ತಿದ್ದೇನೆ. ಏಕೆಂದರೆ, ಇದು ರಾಜ್‌ಕುಮಾರ್ ಬಗ್ಗೆ ಒಂದು ಮುಖ್ಯ ದಾಖಲೀಕರಣವಾಗಿದೆ.

**ಎಲ್.ಜಿ. ಮೀರಾ, ಬೆಂಗಳೂರು**



ಸಂಚಯದ ರಾಜಕುಮಾರ್ ವಿಶೇಷಾಂಕ ಬಂತು. ತುಂಬ ಚೆನ್ನಾಗಿದೆ. ಸಾಹಿತ್ಯ ಪತ್ರಿಕೆಯೊಂದು ರಾಜಕುಮಾರರ ಕುರಿತು ವಿಶೇಷ ಸಂಚಿಕೆಯನ್ನು ರೂಪಿಸಿದ್ದು ನಿಜವಾಗಿಯೂ ವಿಶೇಷ ಎನಿಸುತ್ತದೆ. ನಮ್ಮ ಒಟ್ಟು ಸಾಂಸ್ಕೃತಿಕ ಬದುಕನ್ನು ರಾಜಕುಮಾರ್ ಹೊರತಾಗಿ ಕಲ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಈ ಸಂದರ್ಭದಲ್ಲಿ ನೀವು ಮಾಡಿದ ಈ ವಿಶೇಷ ಸಂಚಿಕೆಯ ಕೆಲಸ ಅಭಿನಂದನಾರ್ಹ.

**ಬಸವರಾಜ ಹೂಗಾರ**, ವಿ.ವಿ. ರಸ್ತೆ, ಮಂಡ್ಯ- ೫೭೧೪೦೧



ಸುಮಾರು ಅರ್ಧಶತಮಾನಕ್ಕೂ ಹೆಚ್ಚು ಕಾಲ ಸಿನಿಮಾ ಜಗತ್ತಿನಲ್ಲಿ ಸೂತ್ರಧಾರನಾಗಿ ಮೆರೆದ ಮೇರುನಟ ಬದುಕಿನ ಕೊನೆಯ ಕಂತುಗಳಲ್ಲಿ ಸೂತ್ರದ ಬೊಂಬೆಯಂತೆ ಬದುಕು ಕಂಡದ್ದು ಎಂಥ ದುರಂತ ಅಥವಾ ಬದುಕಿನ ವೈರುಧ್ಯಗಳಿರುವುದೇ ಅಂತಹ ತತ್ವಗಳಲ್ಲಿ... ಹಾಗಂತ ಭಾವುಕರ ಗುಂಪೊಂದು ರಾಜ್ ಬಗ್ಗೆ ವ್ಯಥೆ ಪಡುತ್ತೆ. ಅದು ರಾಜ್‌ರನ್ನು ಒಬ್ಬ ನಟನಾಗಿ, ಸೂಕ್ಷ್ಮತೆಗಳ ಒಳಸುಳಿಗಳಿಂದ ಗ್ರಹಿಸುವ ಭಾವ.

ರಾಜ್ ತಮ್ಮ ಕಾಲದೇಶದಲ್ಲಿ, ತಮ್ಮಷ್ಟೇ ನಟನಾ ಪ್ರೌಢಿಮೆ ಇದ್ದಂತಹ ಹತ್ತು ಹಲವು ಪ್ರಬುದ್ಧ ನಟರುಗಳನ್ನು ಮೀರಿ ಬೆಳೆದದ್ದು ನಿಜಕ್ಕೂ ಪವಾಡ. ಸಾಂಸ್ಕೃತಿಕ ವಲಯಕ್ಕೆ ರಾಜ್‌ರ ಕೊಡುಗೆ ಅನಂತವಾದುದು. ಅಂತಹ ರಾಜ್‌ಕುಮಾರ್ ಅವರನ್ನು ಹತ್ತಿರದಿಂದ, ದೂರದಿಂದ, ಅಂತರಂಗದಿಂದ... ಹೀಗೆ ಹಲವು ದೃಷ್ಟಿಕೋನಗಳಿಂದ ಗ್ರಹಿಸಿದ 'ಸಂಚಯ' ಆ ನಟನಿಗೆ ಈ ಮೂಲಕ ತನ್ನ ಪಾಲಿನ ಶ್ರದ್ಧಾಂಜಲಿ ಅರ್ಪಿಸಿರುವುದು ಸಂತಸ.

**ಕೃಷ್ಣಶರ್ಮ, ಜಾವಗಲ್, ಹಾಸನ ಜಿಲ್ಲೆ**



# ಸಂಚಿಕೆಯ ಗ್ಯಾಲರಿ



ವಿದ್ಯಾಮೂರ್ತಿ
ಅವರ ರೇಖಾಚಿತ್ರಗಳು

